# ಸಿದ್ಧಗಂಗಾ

ಸಂಪುಟ-31, ಸಂಚಿಕೆ 1-2, ಜನವರಿ-ಫೆಬ್ರುವರಿ 1995.



## ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ವಜ್ರ ಮಹೋತ್ಸವ ಪ್ರತಿಷ್ಠಾನ

ಶ್ರೀ ಸಿದ್ದಗಂಗಾ ಮಠ, ತುಮಕೂರು ಜಿಲ್ಲೆ.

ಶ್ರೀ ಸಿದ್ಧಗಂಗಾ ಮಠದ ಇತಿಹಾಸದಲ್ಲಿ ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕವಾಗಿ ಬೆಳಕಿನ ಯುಗವನ್ನು ನಿರ್ಮಾಣ ಮಾಡಿದ ಕಾರಣಿಕಪುರುಷರು ತ್ರಿವಿಧ ದಾಸೋಹ ಮೂರ್ತಿಗಳಾದ ಪ ಪೂ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು.

‡ 1930 ರಲ್ಲಿ ಪರಮ ಪೂಜ್ಯ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ ಶ್ರೀ ಮಠದ ಸೇವಾ ಕೈಂಕರ್ಯಗಳನ್ನು ಸಾಗರದಷ್ಟು ವಿಸ್ತರಿಸಿದ್ದಾರೆ.

‡ ಪೂಜ್ಯರು ಭಾರತೀಯ ಸಂಸ್ಕೃತಿಯ ಸಾಕಾರ ಸ್ವರೂಪಿಗಳು. ಮಾನವೀಯತೆಯ ಮಂಗಳಕಾರರು. ಅಪೂರ್ವ ರಾಷ್ಟ್ರ ಚಿಂತಕರು.

‡ ಶ್ರೀಗಳವರ ಸೇವಾ ಮಣಿಹವನ್ನು ಕೃತಜ್ಞತೆಯಿಂದ ಸ್ಮರಿಸಿದ ನಾಡಿನ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಇದೀಗ ವಜ್ರ ಮಹೋತ್ಸವ ಆಚರಿಸುವ ಉತ್ಸಾಹದಲ್ಲಿದ್ದಾರೆ, ಶ್ರೀ ಶ್ರೀ ಗಳ ಮೇರು ಸಾಧನೆಗಳನ್ನು ಪ್ರತಿಬಿಂಬಿಸುವ, ಪ್ರಸ್ತುತ ಶ್ರೀ ಮಠಕ್ಕೆ ಅಗತ್ಯ ಸೌಲಭ್ಯಗಳನ್ನು ಪೂರೈಸುವ ಸ್ಮಾರಕಗಳನ್ನು 5 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಲಾಗುತ್ತಿದೆ.

‡ **ಭವ್ಯ ದಿವ್ಯ ಬೃಹತ್ ಪ್ರಸಾದ ನಿಲಯ.**

‡ **ಸುಸಜ್ಜಿತ ಆಧುನಿಕ ಬೃಹತ್ ವಿದ್ಯಾರ್ಥಿನಿಲಯ.**

‡ **ಆಧುನಿಕ ನೈರ್ಮಲ್ಯ ಮತ್ತು ನೀರು ಸರಬರಾಜು ವ್ಯವಸ್ಥೆ.**

ಇವುಗಳ ಅರ್ಧಭಾಗದಷ್ಟು ಕೆಲಸ ಕಾರ್ಯಗಳು ಮುಗಿದಿದ್ದು ಪೂರ್ಣವಾಗಲು ಇನ್ನು 2 ಕೋಟಿ ರೂ ಗಳು ಬೇಕಾಗಿವೆ. ಶ್ರೀ ಶ್ರೀ ಗಳವರ ಸೇವಾ ಸಾಗರದ ಸ್ಮರಣಾರ್ಹ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಅಭಿಮಾನಿಗಳು, ಮತ್ತು ಹಳೆಯ ವಿದ್ಯಾರ್ಥಿಗಳು ಕಾಣಿಕೆ ನೀಡುವುದರ ಮೂಲಕ ವಜ್ರ ಮಹೋತ್ಸವ ಯೋಜನೆಗಳು ಯಶಸ್ವಿಯಾಗಲು ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

ವಿ. ಸೂ :- ನಿರ್ಮಾಣ ಹಂತದಲ್ಲಿರುವ ಪ್ರತಿಷ್ಠಾನ ಭವ್ಯ ಸ್ಮಾರಕಗಳ ಚಿತ್ರಗಳನ್ನು ಹಿಂಬದಿ ಪುಟದಲ್ಲಿ ನೋಡಿ.

**ಪದ್ಮಭೂಷಣ ಡಾ. ಎಂ.ಸಿ. ಮೋದಿ,** ಅಧ್ಯಕ್ಷರು

**ಬಿ.ಎಸ್. ಮುದ್ದಪ್ಪ** ಐ.ಎ.ಎಸ್.(ರಿ) ಕಾರ್ಯಾಧ್ಯಕ್ಷರು

**ಎಸ್. ಎಸ್. ಹಸಬಿ,** ಐ.ಪಿ.ಎಸ್. (ರಿ). ಕಾರ್ಯದರ್ಶಿಗಳು

ಓದುಗರಲ್ಲಿ ನಮ್ರ ಮನವಿ,

"ಸಿದ್ಧಗಂಗಾ" ಮುಖಪುಟದ ಬದಲಾವಣೆ ಮತ್ತು ಜಾತ್ರಾ ಮಹೋತ್ಸವದ ಒತ್ತಡದ ಕಾರ್ಯಚಟುವಟಿಕೆಗಳಿಂದಾಗಿ ಜನವರಿ ಮತ್ತು ಫೆಬ್ರವರಿ 1995 ಸಂಚಿಕೆಗಳು ಒಟ್ಟಾಗಿ ತಡವಾಗಿ ಕೈಸೇರುತ್ತಿರುವುದಕ್ಕಾಗಿ ಕ್ಷಮೆ ಕೋರುತ್ತೇವೆ.

ಪ್ರಕಾಶಕರು

ವಿರತಿ ಶಿವಸಾಕಾರ ಪುಣ್ಯವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಮಾನುಷದ ಕತ್ತಲೆಗೆ ಶಿವದೀಪ ನೀನಾದೆ
ಅನುಭಾವದರವಟಗೆ ನೀತೆರೆದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಲಿಂಗಯ್ಯನೊಲಿದರೆ ಕಲ್ಲುಕರಗುವುದೆಂದೆ
ಬಂಡಿಯ ನೊಗತಾ ಚಿಗುರುವುದೆಂದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಹೆಚ್. ವಿ. ವೀರಭದ್ರಯ್ಯ

# ಶ್ರೀವಾಣಿ

ಸ್ವಾಮಿಗಳು ಚಾರಿತ್ರ್ಯವಂತರಾಗಿರಬೇಕು; ಶುದ್ಧ ಚಾರಿತ್ರ್ಯ ಕಾಪಾಡಿಕೊಂಡು ಬರಬೇಕು. ಸಮಾಜವೂ ಸ್ವಾಮಿಗಳಾದವರು ಚಾರಿತ್ರ್ಯ ಶುದ್ಧರಾಗಿರುವಂತೆ ಸದಾಜಾಗೃತವಾಗಿರಬೇಕು. ಸ್ವಾಮಿತ್ವ ಸಂರಕ್ಷಿಸಿಕೊಳ್ಳದೇ ಹೋದರೆ ಸ್ವಾಮಿಯೂ ಕೆಡುತ್ತಾನೆ, ಸಮಾಜವೂಕೆಡುತ್ತದೆ. ಕಾವಿಲಾಂಛನ ಅಲಂಕಾರಕ್ಕಾಗಿ ಧರಿಸುವುದಲ್ಲ, ಅನುಕೂಲ ಜೀವನೋಪಾಯಕ್ಕಲ್ಲ, ಅನುದಿನ ಅನುಕ್ಷಣ ಆತ್ಮಪರೀಕ್ಷೆಯ ಅವಲೋಕನಕ್ಕಾಗಿ ಇರುವ "ಕರಗಸ". ಅಣ್ಣ ಬಸವಣ್ಣನವರು ಹೇಳುವಂತೆ 'ಭಕ್ತಿಯೆಂಬುದ ಮಾಡಬಾರದು ಅದು ಹೋಗುತ್ತ ಕೊಯ್ವುದು ಬರುತ್ತ ಕೊಯ್ವುದು." ಕಾವಿಯೂ ಅಷ್ಟೆ. ಲೋಕದ ಕಣ್ಣಿಗೆ, ಬಾಯಿಗೆ ಪವಿತ್ರವೆಂಬಂತೆ ಕಂಡುಬಂದರೆ ಸಾಲದು, ತನ್ನ ಒಳಗಣ್ಣಿಗೆ ತಾನೆಷ್ಟು ಪವಿತ್ರ ಪರಿಶುದ್ಧ ಎಂಬುದನ್ನು ಒರೆಹಚ್ಚಿನೋಡಿಕೊಳ್ಳುತ್ತಿರಬೇಕು. "ಜನಮೆಚ್ಚಿ ನಡೆಕೊಂಡರೇನುಂಟು ಜಗದೊಳಗೆ ಮನಮೆಚ್ಚಿ ನಡೆಕೊಂಬುದೆ ಚೆಂದವು" ಎಂಬ ಅನುಭವ ವಾಣಿಯ ಮೊರೆ ಸದಾಒಳಗೆ ಮೊಳಗುತ್ತಿರಬೇಕು. ಮೇಲಾಗಿ ಕಾವಿ ಕಾರು ಣ್ಯಕ ಕಾರಂಜಿಯಾಗಿರಬೇಕು. ಮಗು ಮುಗ್ಧಮನ ಪ್ರಬುದ್ಧ ವಿಚಾರ ಶುದ್ಧ ವಿರಬೇಕು. ಹಣ, ಅನುಕೂಲ, ಆಶ್ರಯಾದಿಗಳ ಆಮಿಷಗಳನ್ನೊಡ್ಡಿ ಸಮಾಜ ವನ್ನು ತಪ್ಪು ದಾರಿಗೆಳೆಯುವಂಥ ಜೀವನಕ್ಕಾಗಿಯಲ್ಲ ಕಾವಿ ವಸ್ತ್ರ, ಅಂತರಂಗ ದಲ್ಲಿ ಅಲೆ ಆಲೆಯಾಗಿ ಏಳುವ ಅಸಂಖ್ಯಾತ್ಮ ಕಾಮನೆಗಳನ್ನು ಸುಟ್ಟು ರುಹುವುದ ಕ್ಕಾಗಿ ಕಾವಿ ಮಾಧ್ಯಮವನ್ನವಲಂಬಿಸಬೇಕು. ಅಂತರಂಗ ಬಹಿರಂಗಗಳೆರಡನ್ನೂ ಏಕಕಾಲಕ್ಕೆ ಪವಿತ್ರಗೊಳಿಸುವ ಪ್ರವೃತ್ತಿಗಾಗಿ ಕಾವಿ ಧಾರಿಯಾಗಬೇಕು. ಸ್ವಾಮಿತ್ವ ಮೊದಲು ತನ್ನ ದೌರ್ಬಲ್ಯಗಳ ಮೇಲೆ; ಆಮೇಲೆ ಲೋಕ ಜೀವನದ ವ್ಯವಹಾರದ ಮೇಲೆ ಪ್ರಾಚೀನ ಪರಂಪರೆ ಕಾವಿ ಲಾಂಛನಕ್ಕೆ ಅತ್ಯುತ್ತಮ ಮಾರ್ಗದರ್ಶನ ಮಾಡುತ್ತ ಬಂದಿದೆ. ಬ್ರಹ್ಮಚರ್ಯ ಪಾಲನೆ ಸ್ವಾಮಿಗಳಾದವರು ಎದುರಿಸ ಬೇಕಾದ ಅಗ್ನಿ ಪರೀಕ್ಷೆ. ಅದರಲ್ಲಿ ಜಯಶೀಲರಾಗದ ಹೊರತು ಕಾವಿಧಾರಿಯಾಗಲು ಅರ್ಹರಾಗಲು ಬರದು. ಅಲ್ಲಿ ಗೆದ್ದರೆ ಸಮಾಜ ಗೌರವ ಕೊಡುತ್ತದೆ. ಆತ್ಮ ಸ್ಥೈರ್ಯಬೆಳೆಯುತ್ತದೆ. ಸಮಾಜಕ್ಕೆ ಮಾರ್ಗದರ್ಶನ ಮಾಡುವ ಸಾಮರ್ಥ್ಯ ಬರುತ್ತದೆ, ಈಗಿನ ಈ ದಿನದಲ್ಲಿ ಸ್ವಾಮಿಗಳಾದವರು ನಡೆದಾಗ ಆತ್ಮ ಕಲ್ಯಾಣದಜೊತೆಗೆ ಲೋಕ ಕಲ್ಯಾಣವು ಸಾಧ್ಯವಾಗುತ್ತದೆ. ಕಾಮುವನ್ನು ವಿಸರ್ಜಿಸುವ ದಿವ್ಯ ಮಾಧ್ಯಮ ಕಾವಿಯೇ ಹೊರತು ಕಾಮುವನ್ನು ವಿಸ್ತರಿಸುವ ಮಾರ್ಗವಲ್ಲ. ಸ್ವಾಮಿಗಳಾದವರೆಲ್ಲ ಚಿಂತನ ಶೀಲರಾಗಬೇಕು. ಸಾಧಕರಾಗಬೇಕು "ಅಡಿಗಲ್ಲ ಮೇಲೆ ಬಂದು ಕಡಿಹಕ್ಕೆ ಬಡಿಹಕ್ಕೆ ಎದೆಯೊಡ್ಡಬೇಕು" ಸಮಾಜ ಸದಾ "ಜಾಗರವಿದ್ದು ಸಸಿಯ ಸಲಹ ಬೇಕು".

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥



ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೆ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

## ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾ ಮಹೋತ್ಸವ ಪತ್ರಿಕೆ

**ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು**

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1916ನೇ ಭಾವನಾಮ ಸಂವತ್ಸರದ

| | | | |
|---|---|---|---|
| ಮಾಘ ಬಹುಳ ಪಂಚಮಿ | ಸೋಮವಾರ | 20-2-95 | ವೃಷಭ ವಾಹನ, ನವಿಲು ವಾಹನ |
| " ಷಷ್ಠಿ | ಮಂಗಳವಾರ | 21-2-95 | ಹುಲಿವಾಹನ, ನಂದಿ ವಾಹನ |
| " ಸಪ್ತಮಿ ಉ॥ ಅಷ್ಟಮಿ | ಬುಧವಾರ | 22-2-95 | ಹುತ್ತದ ವಾಹನ, ಅಶ್ವವಾಹನ |
| " ನವಮಿ | ಗುರುವಾರ | 23-2-95 | ಮುತ್ತಿನಪಾಲಕಿ ಉತ್ಸವ |
| " ದಶಮಿ | ಶುಕ್ರವಾರ | 24-2-95 | ಸಿಂಹವಾಹನ, ರಾವಣ ವಾಹನ |
| " ಏಕಾದಶಿ | ಶನಿವಾರ | 25-2-95 | ಗಜವಾಹನ, ಶೇಷವಾಹನ |
| " ದ್ವಾದಶಿ | ಭಾನುವಾರ | 26-2-95 | ಬಿಲ್ವವೃಕ್ಷವಾಹನ, ನವರಂಗ ಪಾಲಕಿ ಉತ್ಸವ |
| " ತ್ರಯೋದಶಿ | ಸೋಮವಾರ | 27-2-95 | ಮಹಾಶಿವರಾತ್ರಿ ಪೂಜಾದಿಗಳು, ಮುತ್ತಿನಪಾಲಕಿ ಉತ್ಸವ |
| " ಚತುರ್ದಶಿ | ಮಂಗಳವಾರ | 28-2 95 | ರಥೋತ್ಸವ ಮತ್ತು ರುದ್ರಾಕ್ಷಿಮಂಟಪೋತ್ಸವ |
| " ● ಅಮವಾಸ್ಯೆ | ಬುಧವಾರ | 1-3-95 | ಬೆಳ್ಳಿಪಾಲಕಿ ಉತ್ಸವ |
| ಫಾಲ್ಗುಣ ಶುದ್ಧ ಪಾಡ್ಯ | ಗುರುಪಾರ | 2-3-95 | ತೆಪ್ಪೋತ್ಸವ, ಪಂಚಬ್ರಹ್ಮೋತ್ಸವ |

ಮಾಮೂಲಿನಂತೆ "ಎತ್ತಿನ ಪರಿಷೆಯೂ" ದಿನಾಂಕ 25–2–95ನೇ ಶನಿವಾರ "ದನಗಳ ಪ್ರದರ್ಶನ" ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿನಿಯೋಗವು ನಡೆಯುವಂತೆ ಏರ್ಪಡಿಸಿದೆ. "ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ" ದಲ್ಲಿ ಪ್ರತಿ ದಿವಸವೂ ಸಾಯಂಕಾಲ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವಂತೆ ಏರ್ಪಾಡು ಮಾಡಲಾಗಿದೆ.

ಸರ್ವರೂ ಎಲ್ಲಾ ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಮಠ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು

## ಶ್ರೀ ಸಿದ್ಧಲಿಂಗೇಶ್ವರ ವಚನ



ಜಂಗಮಕ್ಕೊಂದನಿಕ್ಕಿ ತಾನೊಂದನುಂಬನೇ ಪ್ರಸಾದಿ?
ಜಂಗಮ ಉಂಡರೆ ಮನದಲ್ಲಿ ಮರುಗುವನೇ ಪ್ರಸಾದಿ?
ಜಂಗಮಕ್ಕೆ ತಳಿಗೂಳ ತಳಿದು
ತಾ ಗಂಗಳ ತುಂಬ ಒಟ್ಟೈಸಿಕೊಂಡು ಕೊಂಬನೇ ಪ್ರಸಾದಿ?
ಪ್ರಸಾದಿಯಂತೆ ಪ್ರಪಂಚಉಂಟೆ ?
ಕಕ್ಕುಲತೆಯ ಮಾಡಿಕೊಂಡನಾದರೆ
ನಾಯ ಮಾಂಸವತಿಂದ ಸಮಾನಕಾಣಿರೊ ?
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ?

ಪ್ರಸಾದಿ ಸ್ಥಲದಲ್ಲಿ ನಿಂತುಕೊಂಡವನು ಲಿಂಗಮುಖವಾದ ಜಂಗಮಕ್ಕೆ ಅರ್ಪಿಸಿದ್ದನ್ನೇ ತಾನು ಪ್ರಸಾದ ರೂಪದಲ್ಲಿ ಸ್ವೀಕರಿಸ ಬೇಕಾಗುವುದು. ಅದಕ್ಕಾಗಿ ಅವನು ಜಂಗಮಕ್ಕೆ ನೀಡುವುದೊಂದು, ತಾನು ಉಣ್ಣುವುದೊಂದು ಹೀಗೆಂದೂ ಮಾಡನು. ಒಂದು ವೇಳೆ ಮಾಡಿದರೆ ಅವನೆಂದೂ ಪ್ರಸಾದಿ ಯಾಗನು. ಒಡಲ ಕಕ್ಕುಲತೆಗಾಗಿ ವಂಚನೆಯಿಂದ ಭೋಗಿಸುವವನು ನಿಜವಾಗಿಯೂ ಪ್ರಸಾದ ಭೋಗಿಯೇ ಅಲ್ಲ. ಆವನು ಹೀನ ನಾಯಿಯ ಮಾಂಸವನ್ನು ತಿನ್ನುವವನಿಗೆ ಸಮಾನವಾಗುವನು. ಪ್ರಸಾದ ಭೋಗಿಯಾದವನು ಎಷ್ಟು ನಿರ್ವಂಚನೆಯಿಂದಿರಬೇಕಾಗಿರುವುದೆಂಬುದನ್ನು ಈ ವಚನದಲ್ಲಿ ಕಂಡು ಕೊಳ್ಳಬಹುದಾಗಿದೆ.

[ಕೃಪೆ: ಷಟ್‌ಸ್ಥಲ ಜ್ಞಾನಸಾರಮೃತ, ಶ್ರೀ ತೋ.ಸಿ.ಕೈ. ಸೇ ಸಂಘ ಎಡೆಯೂರು–ಗದಗ]

**ಲೇಖಕರಲ್ಲಿ ಮನವಿ**

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪು-ಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿ-ಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡ-ಲಾಗುವುದು.


" ಸಂಪಾದಕರು "
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.



**1–1–95 ರಿಂದ ಚಂದಾ ದರ**
ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00


## ಸಂಪಾದಕೀಯ

"ಸಿದ್ಧಗಂಗಾ" ಮೂವತ್ತೊಂದನೆ ಸಂಪುಟವಾಗಿ ಪ್ರಕಟವಾತ್ತಿದೆ- ಈ ಜನವರಿ 1995 ರಿಂದ ಮುವತ್ತುವರ್ಷಗಳಿಂದ ನಡೆದು ಬಂದಿರುವ ನಿಮ್ಮ "ಸಿದ್ಧಗಂಗಾ" ಪತ್ರಿಕೆಗೆ ನೀವು ತೋರಿಸುತ್ತ ಬಂದಿರುವ ಪ್ರೀತಿಗೆ, ನೀಡುತ್ತ ಬಂದಿರುವ ಸಹಕಾರಕ್ಕೆ, ಲೇಖಕರಾದ ಸಹೃದಯರಿಗೆ, ಜಾಹಿರಾತು ನೀಡಿ ಬೆನ್ನು ತಟ್ಟುತ್ತಿರುವ ಹಿತೈಷಿಗಳಿಗೆ, ಆಜೀವ ಸದಸ್ಯರುಗಳಿಗೆ ವಾರ್ಷಿಕ ಚಂದಾದಾರರಿಗೆ ಮುದ್ರಣಾಲಯದವರಿಗೆ ವಂದನೆಗಳನ್ನು ಸಲ್ಲಿಸುತ್ತದೆ.

ಶ್ರೀ ಮಠದ ಹಳೆಯ ವಿದ್ಯಾರ್ಥಿಸಂಘದ ಪ್ರೀತಿಯ ಪತ್ರಿಕೆಯಾದ ಸಿದ್ಧಗಂಗಾ ತ್ರೈಮಾಸಿಕವಾಗಿ ಅಂಕುರಿಸಿ, ಮಾಸಿಕವಾಗಿ ಮುನ್ನಡೆದಿದೆ. ಪತ್ರಿಕೆಯ ಶ್ರೀ ರಕ್ಷೆಯಾಗಿ ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಾದದ ನೆರಳಿತ್ತಿದ್ದಾರೆ. ಸಂಘ ಸಮಯೋಚಿತ ಮಾರ್ಗದರ್ಶನ ಮಾಡುತ್ತ ಬಂದಿದೆ. ಹಿರಿಯ ವಿದ್ವಾಂಸರು, ಶ್ರೀ ಮಠದ ಮೇಲಿನ ಅಭಿಮಾನದಿಂದ ಸಂಪಾದಕರಾಗಿ ಸಹಸಂಪಾದಕರಾಗಿ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಪ್ರಕಾಶನದ ಹೊರೆ ಹೊತ್ತಿರುವ ಮಿತ್ರರು ನಿಷ್ಠೆ ವಿಶ್ವಾಸಗಳ ಪ್ರತಿರೂಪವಾಗಿ ಸಹಕರಿಸುತ್ತಿದ್ದಾರೆ. ವಾಚಕರು ಪತ್ರಿಕೆಯ ಬಗ್ಗೆ ಅಭಿಮಾನದ ಮಾತುಗಳನ್ನು ಆಡುವುದರ ಮೂಲಕ ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತಿದ್ದಾರೆ, ಸಲಹೆ ನೀಡುತ್ತಿದ್ದಾರೆ. ಎಲ್ಲರಿಗೆ "ಸಿದ್ಧಗಂಗಾ" ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಶ್ರೀ ಮಠದಲ್ಲಿ ಸಿದ್ದೇಶ್ವರ ಪುರಾಣದ ಪ್ರವಚನ ನಡೆದಿದೆ. ಸ್ವಾಧ್ಯಾಯ ಪ್ರವಚನಗಳೆರಡೂ ಸುಸಂಸ್ಕೃತ ಜೀವನಕ್ಕೆ ಸುಲಭೋಪಾಯಗಳು. ಪುರಾಣ ನಮ್ಮ ಪಾರಂಪರಿಕೆ ಜೀವನದ ಪರಿಚಯ ದರ್ಶಿಕೆ. ಪ್ರಾಚೀನ "ಮನಸ್ಸು" ಗಳು ರೂಪಿತವಾದ ರೀತಿ ನೀತಿಗಳನ್ನು ಕಂಡುಕೊಳ್ಳಲು ಇರುವ ಮಾಧ್ಯಮುಗಳು ಜನಸಾಮಾನ್ಯರನ್ನು ಶಿಕ್ಷಣಗೊಳಿಸುತ್ತ ಬಂದಿರುವ "ಸುಳಿವ ಶಾಸನ"ಗಳು. ನೈತಿಕ ಶಿಕ್ಷಣದ ಮಹತ್ವದ ಬಗ್ಗೆ ಇಂದು ಎಲ್ಲೆಲ್ಲೂ ಕೇಳಿಬರುತ್ತಿದೆ. ಪುರಾಣ

ಶ್ರವಣ ಅದಕ್ಕೆ ಸಹಾಯಕ. ಪುರಾಣಗಳು ಕವಿ ಕಲ್ಪಿತ ಕಟ್ಟುಕಥೆಗಳಲ್ಲ. ದಾರ್ಶನಿಕ ಸತ್ಯವನ್ನು ಕಥಾರೂಪದಲ್ಲಿ ಜನಮನಕ್ಕೆ ಮುಟ್ಟಿಸುವ ತಂಪು ದೀಪಗಳು. ಶ್ರೀ ಸಿದ್ದಲಿಂಗೇಶ್ವರರು ಕರ್ನಾಟಕದಲ್ಲಿ ಶರಣ ಧರ್ಮಪ್ರಸಾರ ಮಾಡಿದ ಮಹಿಮಾಪುರುಷರು. ವಿರಕ್ತ ಪರಂಪರೆಯಲ್ಲಿ ಬೆಳಗಿದ ತೇಜೋಮೂರ್ತಿಗಳು. ಅವರನ್ನು ಕುರಿತು ಹಲವಾರು ಕವಿಗಳು ಕಾವ್ಯ ರಚಿಸಿದ್ದಾರೆ ಅವು ವಿವಿಧ ಛಂದೋವರೂಪಗಳಲ್ಲಿವೆ. ಶ್ರೀ ಮಠದಲ್ಲಿ ನಡೆದಿರುವ ಸಿದ್ದೇಶ್ವರಪುರಾಣ ಪ್ರವಚನಕ್ಕೆ ಬಳಸಿಕೊಂಡಿರುವ ಕೃತಿ ವಿರಕ್ತ ತೋಂಟದಾರ್ಯ ರಚಿತ ಗ್ರಂಥ. 1995 ರ ಒಂದನೆ ತಾರೀಖಿನಿಂದ ಪ್ರಾರಂಭವಾಗಿರುವ ಪ್ರವಚನ ಪರಮ ಪೂಜ್ಯ ಶಿವಯೋಗಿ ಶ್ರೀ ಶ್ರೀ ಉದ್ದಾನಸ್ವಾಮಿಗಳವರ 54 ನೇ ಪುಣ್ಯಾರಾಧನೆಯ ಸಂದರ್ಭದಲ್ಲಿ 1995ರ ಜನವರಿ ಹದಿನೈದನೆ ತಾರಿಖಿನವರೆಗೆ ಪ್ರತಿದಿನ ಸಂಜೆ ನಡೆದು ಇದೀಗ ಪ್ರತಿ ಸೋಮವಾರ ಸಂಜೆ ಮುಂದುವರಿದಿದೆ. ಶ್ರೀ ಉದ್ದಾನೇಶ್ವರ ಗದ್ದುಗೆಯಲ್ಲಿ ನಡೆಯುತ್ತಿರುವ ಪ್ರವಚನಕ್ಕೆ ಆಸಕ್ತಸಹೃದಯರು ಆಗಮಿಸುತ್ತಿದ್ದಾರೆ. ಇತ್ತೀಚೆಗೆ ಬೆಂಗಳೂರಿನ ಕಂಟ್ರಾಕ್ಟರ್ ಶ್ರೀ ಲಿಂಗದೇವರಪ್ಪ ಮತ್ತು ಸಹೋದರರು ಉದ್ದಾನೇಶ್ವರ ಗದ್ದುಗೆಯ ನವೀಕರಣಗೊಳಿಸಿ ಪ್ರಶಾಂತ ಪರಿಸರ ನಿರ್ಮಾಣ ಮಾಡಿಕೊಟ್ಟಿದ್ದಾರೆ. ಧಾರ್ಮಿಕ ಪ್ರವಚನಗಳಿಗೆ ಪ್ರಶಸ್ತಿ. ಶ್ರೀ ಮಠದ ಉತ್ತರಾಧಿಕಾರಿಗಳಾದ ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರ ನೇತೃತ್ವದಲ್ಲಿ ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ಪ್ರವಚನ ಕಾರ್ಯಕ್ರಮ ನಡೆಯುತ್ತಿದೆ. ಕಾವ್ಯವಾಚನ ಸೇವೆಯನ್ನು ವಿದ್ವಾನ್ ಶ್ರೀ ಪಿ. ಎಸ್. ಚಂದ್ರಶೇಖರಯ್ಯನವರು ಹಾಗೂ ವ್ಯಾಖ್ಯಾನ ಸೇವೆಯನ್ನು ವಿದ್ವಾನ್ ಶ್ರೀ ಕೆ. ಬಸವರಾಜು ಅವರು ನಡೆಸಿಕೊಡುತ್ತಿದ್ದಾರೆ ಶ್ರೀ ಮಠದ ಸೇವಾ ಮಹಿಹ ದಿನದಿನಕ್ಕೂ ವೃದ್ಧಿಸುತ್ತಸಾಗಿದೆ. ಇತ್ತೀಚೆಗೆ ಯಾತ್ರಾರ್ಥಿಗಳ ಮಹಾ ಪೂರವೇ ಶ್ರೀ ಮಠಕ್ಕೆ ಪ್ರತಿನಿತ್ಯ ಹರಿದು ಬರುತ್ತಿದೆ. ಆದರೆ "ಶಿವಗಂಗೆಯ ನೋಟ ಸಿದ್ಧಗಂಗೆಯ ಊಟ" ಎಂಬಂತೆ ದಾಸೋಹ ಕೈಂಕರ್ಯಕ್ಕೆ ದಿನದ ಇಪ್ಪತ್ನಾಲ್ಕು ಘಂಟೆಗಳೂ ಸಾಕಾಗುತ್ತಿಲ್ಲ "ಎಲ್ಲ ಶಿವಯೋಗಿಗಳ ತಪಸ್ಸಿನ ಫಲ" ಎಂದೇ ಬಂದ ಭಕ್ತಾದಿಗಳ ಬಾಯಲ್ಲಿ ಬರುತ್ತಿರುವ ಮಾತು.

## " ಸಿದ್ಧಿಯ ತಾಣ ಶ್ರೀ ಸಿದ್ಧಗಂಗಾ ಕ್ಷೇತ್ರ "

ಭರತಖಂಡ ಕರ್ಮಭೂಮಿ. ಸಿದ್ಧಪುರುಷರ ನಾಡೆಂದು ಹೆಸರಾಗಿದೆ. ಜ್ಞಾನ ಮೊದಲು ಇಲ್ಲಿ ಉದಯಿಸಿ ಬೇರೆಡೆಗೆ ಪ್ರವಹಿಸಿತು. ಇದು ಧರ್ಮ ಕ್ಷೇತ್ರದ ನಾಡು. ಋಷಿ-ಮುನಿಗಳ, ಸಾಧು ಸಂತರ ಬೀಡು. ದಾರ್ಶನಿಕರ ಗೂಡು. ಪ್ರಾಚೀನ ಕಾಲದಿಂದ ಭಾರತ ತನ್ನದೇ ಆದ ಸಂಸ್ಕೃತಿ ಸಾಹಿತ್ಯಗಳನ್ನು ರೂಢಿಸಿಕೊಂಡು ಬಂದಿದೆ. ಪ್ರಪಂಚದ ಹಲವಾರು ಪ್ರಾಚೀನ ಸಂಸ್ಕೃತಿಗಳಲ್ಲಿ ಭಾರತೀಯ ಸಂಸ್ಕೃತಿಯೂ ಒಂದು. ಇಂದು ಅವುಗಳೆಲ್ಲಾ ಕಾಲಗರ್ಭದ ಹೊಡೆತಕ್ಕೆ ಸಿಕ್ಕಿ ನಾಮಾವಶೇಷವಾಗಿ ಹೆಸರಿನಲ್ಲಿ ಮಾತ್ರ ಉಳಿದಿವೆ. ಆದರೆ ಭಾರತೀಯ ಸಂಸ್ಕೃತಿ, ಹಲವಾರು ಹೊಡೆತಕ್ಕೆ ಸಿಕ್ಕಿದರೂ, ಅವುಗಳನ್ನೆಲ್ಲಾ ತಡೆದು, **ಹಲವಾರು ಧರ್ಮಗಳಸಾರವನ್ನು ಅರಗಿಸಿಕೊಂಡು, ತನ್ನದೇ ಆದರೀತಿಯಲ್ಲಿ ಜೀವಂತವಾಗಿ ಉಳಿದಿದೆ. ಹದಿನೆಂಟನೆಯ ಶತಮಾನದಲ್ಲಿ ಅಬ್ಬರಿಸಿ ಆರ್ಭಟಿಸಿ, ಮೇಲೆರಗಿ ಬಂದ ಪಾಶ್ಚಾತ್ಯ ಸಂಸ್ಕೃತಿಯನ್ನೂ ಮೈಗೂಡಿಸಿಕೊಂಡು ಬೆಳೆದು ಬದುಕಿದ ಭಾರತೀಯ ಸಂಸ್ಕೃತಿ ತನ್ನ ಸಿಂಧು ವೈಶಾಲ್ಯಕ್ಕೆ ಸಾಕ್ಷಿ.**

ಭರತಖಂಡದ ಉದ್ದಗಲಕ್ಕೂ ಧರ್ಮಕ್ಷೇತ್ರಗಳು ಕಂಗೊಳಿಸುತ್ತವೆ. ಇವುಗಳಲ್ಲಿ ಹಲವು ಪ್ರಾಚೀನತಮವಾದರೆ ಮತ್ತೆಕೆಲವು ಆಧುನಿಕ ಭಾರತೀಯ ಸಂಸ್ಕೃತಿಯ ಸಂದೇಶವನ್ನೊಯ್ಯಲು ಉದಯವಾದವು. ಪ್ರಾಚೀನವೇ ಆಗಲಿ, ಅರ್ವಾಚೀನವೇ ಆಗಲಿ ಇವುಗಳೆಲ್ಲ ಅತಿ ಮಹತ್ವವಾದವು. **ಇಂಥಹ ಪ್ರಾಚೀನವೂ, ತಪೋನಿಧಿಗಳ ತಾಣವೂ, ಸಂಸ್ಕೃತಿಸಾಹಿತ್ಯಗಳ ಸಂಗಮವೂ ಆದ ಧರ್ಮಕ್ಷೇತ್ರಗಳಲ್ಲಿ ಶ್ರೀ ಸಿದ್ಧಗಂಗಾಕ್ಷೇತ್ರವೂ ಒಂದು. ಅದರ ಉಗನು ತಲಕಾವೇರಿಯಿದ್ದ ಹಾಗೆ.** ಅದರ ಹರಹು, ಮಹತ್ತು, ಬೃಹತ್ತು ಭವ್ಯವಾದದ್ದು. ಕರ್ನಾಟಕದ ಜನಸಾಮಾನ್ಯರಿಗೆ " ಶ್ರೀ ಸಿದ್ಧಗಂಗಾ " **ಎನ್ನುವ ಮಾತು ಪ್ರಣವದಷ್ಟು ಪವಿತ್ರವಾದುದು.** ಅದು ಜಾತಿ ಮತ ಭೇದವಿಲ್ಲದೆ ಸರ್ವಜನಾದರಣೀಯವಾದಕ್ಷೇತ್ರ. ಅದರ ಸಂದರ್ಶನವೆಂದರೆ ಜನತೆಗೆ ಆನಂದ ಹಾಗೂ ಅವರ ನಿತ್ಯ ಜೀವನದಲ್ಲಿ ಅಚ್ಚಳಿಯದ ಪ್ರಭಾವವನ್ನು ಬೀರುತ್ತಿರುವ ಧರ್ಮಕ್ಷೇತ್ರ.

ಶ್ರೀ ಕ್ಷೇತ್ರ ಕರ್ನಾಟಕದ ಜನಮನಸ್ಸಿನಲ್ಲಿ ಹೀಗೆ ನಿರಂತರ ಪ್ರಭಾವವನ್ನು ಬೀರಲು ಕಾರಣವಾದರು ಯಾವುದು? ಈ ಕ್ಷೇತ್ರ ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಮತ್ತು ಸಾಮಾಜಿಕವಾಗಿ ಎಲ್ಲರ ಮನಸ್ಸನ್ನು ಸೆಳೆದಿದೆ. ಇಲ್ಲಿ **ಜ್ಞಾನಾಕಾಂಕ್ಷಿಗಳಿಗೆ ಜ್ಞಾನವಿದೆ, ಧರ್ಮಜಿಜ್ಞಾಸುಗಳಿಗೆ ಧರ್ಮವಿದೆ, ಸಮಾಜ ವಿಜ್ಞಾನಿಗಳಿಗೆ,**

**ಸಮಾಜ ಸುಧಾರಣೆಯಿದೆ,** ಸಮಾನ್ಯ ಜನರಿಗೆ **ಅವರ ಜೀವನವನ್ನು ಪಾವನ ವನ್ನಾಗಿಸುವ ಶ್ರೀಗುರುವಿನ ದರ್ಶನವಿದೆ.** ಇಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳಿರುವುದರಿಂದೆ, ನಾಡಿನಾದ್ಯಂತ ವಿದ್ಯಾರ್ಥಿಗಳು ವಿದ್ಯಾಕಾಂಕ್ಷಿಗಳಾಗಿ ಬರುತ್ತಾರೆ. ಅಲ್ಲಿ ನೀಡುವ ಅನ್ನದಾಸೋಹ ಹಾಗೂ ಜ್ಞಾನ ದಾಸೋಹಗಳಿಂದ ಮೈಮನಗಳೆರಡನ್ನು ಅರಳಿಸಿಕೊಳ್ಳಲು ಅವಕಾಶವಿದೆ. ಶ್ರೀ ಕ್ಷೇತ್ರದಲ್ಲಿ ವಿದ್ಯಾರ್ಜನೆ ಮಾಡಿದ ವಿದ್ಯಾರ್ಥಿ–ಗಳು, ನಾಡಿನಾದ್ಯಂತ, ಹಾಗೂ ನಾಡಿನಾಚೆಯೂ ದೇಶ ಸೇವೆ ಸಲ್ಲಿಸುತ್ತಿದ್ದಾರೆ. **ಶ್ರೀ ಕ್ಷೇತ್ರವಿರುವುದು ನಾಡಿನ ಪುಣ್ಯ. ದೀನ-ದಲಿತರಿಗೆ, ದೀನರಲ್ಲಿ ದೀನರಿಗೆ ಬೆನ್ನೆಲುಬಾಗಿದೆ. ಇಂದು** ಇದರ ರೀತಿಯಲ್ಲಿ ಅನೇಕ ಸಂಸ್ಥೆಗಳು ನಾಡಿಗೆ ಸೇವೆ-ಸಲ್ಲಿಸಲು ಮುಂದೆ ಬಂದಿವೆ. ಆದರೆ **ದೀನದಲಿತೋದ್ಧಾರವೇ ತನ್ನ ಮುಖ್ಯ ಗುರಿ ಎಂದು ಶರಣ ಮಾರ್ಗದಲ್ಲಿ, ಮೊದಲು ಪ್ರಾರಂಭವಾದ ಸಂಸ್ಥೆ ಎಂದರೆ ಶ್ರೀ ಕ್ಷೇತ್ರ.** ಇದರಿಂದಾಗಿ ಸಹಸ್ರಾರು ಮಂದಿ ದೀನದಲಿತರು ಇದರ ನೆರವಿನಿಂದ ಮುಂದುವರಿದಿದ್ದಾರೆ.

"ಶ್ರೀ ಸಿದ್ಧಗಂಗಾ" ಎನ್ನುವ ಮಾತು ಮಂತ್ರ ಮುಗ್ಧವಾದುದು **ಈ ಮಾತು ಅಂತರಾರ್ಥದಲ್ಲಿ ಪರಿಪೂರ್ಣವೆಂದೂ, ಪಾವನ ಗಂಗೆ ಎಂಬ ಶ್ರೀ ಕ್ಷೇತ್ರದ** ಪರಿಸರವೂ ಅಂತಹುದೇ! ತುಮಕೂರು ನಗರದ ಜನಸಂದಣಿಯಿಂದ ದೂರ ಸರಿದು ಪ್ರಶಾಂತವಾತಾವರಣದಲ್ಲಿ, 'ಧ್ಯಾನಮಗ್ನನಾದ ಋಷಿಯಂತೆ' ನಿಂತಿದೆ. ಬೆಟ್ಟದ ಪರಿಸರ, **ಪ್ರಕೃತಿದತ್ತವಾದ ಸೌಂದರ್ಯ, ನಿಸರ್ಗ ರಮಣೀಯತೆ ಎಂಥವರ ಮನಸಸ್ನಾದರು ಮಂತ್ರಮುಗ್ಧರನ್ನಾಗಿಸುತ್ತದೆ.** ಶ್ರೀ ಕ್ಷೇತ್ರ ಆಧುನಿಕ ಸಾಧನ ಸೌಕರ್ಯ-ಸಂಪರ್ಕಗಳನ್ನೆಲ್ಲಾ ಹೊಂದಿದೆ. ಆದರೂ ನಮ್ಮ ಹಿಂದಿನ ಭಾರತೀಯ ಗುರುಕುಲಾಶ್ರಮದ ನೆನಪನ್ನು ತರುತ್ತದೆ. ಇಂದಿನ ನವನಾಗರೀಕತೆಯ ನಾಗಿಣಿಯು ಕುಟುಕುತ್ತಿರುವಾಗಲೂ ಇಂಥಹ ಕ್ಷೇತ್ರಗಳ ಅವಶ್ಯಕತೆ ಬಹಳ ಅಗತ್ಯ. ಇಲ್ಲಿಗೆ ಬರುವ ಜನ ನಾನಾ ವರ್ಗದವರು. **ಜ್ಞಾನದಾಹಿಗಳಾಗಿ, ಗುರುದರ್ಶನಾರ್ಥಿಗಳಾಗಿ, ಶ್ರೀ ಕ್ಷೇತ್ರ ದರ್ಶನಾರ್ಥಿಗಳಾಗಿ** ಬರುತ್ತಾರೆ. ಬಂದವರು **ಅವರಿಗವರಂತೆ ತಮ್ಮ ಆತ್ಮದಅನಂತ ಹಸಿವನ್ನು ನೀಗಿಕೊಂಡು ಸಂತೃಪ್ತರಾಗಿ ಹಿಂತಿರುಗುತ್ತಾರೆ. ನಾಲ್ಕು** ಸಾವಿರಕ್ಕೂ ಮೀರಿದ ವಿದ್ಯಾರ್ಥಿವೃಂದ ಕ್ಷೇತ್ರ ದರ್ಶನಕ್ಕಾಗಿ ಬರುವಯಾತ್ರಾರ್ಥಿಗಳೆಲ್ಲರಿಗೂ, ಆಶನ ವಸತಿಯ ಏರ್ಪಾಟೆಂದರೆ ಪವಾಡ ಸದೃಶವಾದ ಕಾರ್ಯ. ಹತ್ತಾರು ಸಂಸ್ಥೆಗಳು ಮಾಡಲಾರದ ಕಾರ್ಯವನ್ನು ಶ್ರೀ ಕ್ಷೇತ್ರ ಮಾಡುತ್ತಿದೆ ಎಂದರೆ ಯಾವುದೋ ಕಾಣದ ಕೈಯ್ಯ ಆಶೀರ್ವಾದವಿರಬೇಕು. ಇಲ್ಲಿ ವಿದ್ಯಾರ್ಜನೆ ಮಾಡುವ ವಿದ್ಯಾರ್ಥಿಗಳು, ಜೀವನ ತರಬೇತಿಯನ್ನು ಪಡೆಯುತ್ತಾರೆಂಬುದರಲ್ಲಿ ಸಂದೇಹವಿಲ್ಲ. ಇಲ್ಲಿ ಅವರ ಮೈ-ಮನಗಳೆಲ್ಲವೂ ಅರಳುತ್ತವೆ. ಸೇವಾಮನೋಭಾವ ಮೈಗೂಡುತ್ತದೆ. ಧಾರ್ಮಿಕ ಹಾಗೂ ಕಾಯಕ ವಾತಾವರಣದಲ್ಲಿ ಬೆಳೆದ ಇವರು, ನಾಡಿನ ಸತ್ಪ್ರಜೆಗಳಾಗುತ್ತಾರೆ.



ಶ್ರೀ ಕ್ಷೇತ್ರ; ಎಡೆಯೂರು ಶ್ರೀ ಸಿದ್ಧಲಿಂಗೇಶ್ವರರ ಭವ್ಯ-ದಿವ್ಯ ಪರಂಪರೆಯಲ್ಲಿ ನಡೆದುಬಂದು, ಅವರ ಅನಂತರ ಹಲವಾರು ಶಿವಶರಣರ ಪಾದಸ್ಪರ್ಶದಿಂದ ಪವಿತ್ರವಾಗಿ, ಅವರು ತಪವ್ಯೆಸಗಿದ ಕಾತಣವಾಗಿದೆ. ಶ್ರೀ ಅಟವೀಸ್ವಾಮಿಗಳು, ಉದ್ಧಾನಶಿವಯೋಗಿಗಳು, ಅವರ ಅನಂತರ ಬಂದ ತ್ರಿವಿಧ ದಾಸೋಹಿ ಡಾ|| ಶ್ರೀ ಶಿವಕುಮಾರ ಸಾಮಿಗಳು ಕರ್ನಾಟಕದ ಜನಮನದಲ್ಲಿ ನೆಲೆಸಿನಿಂತು. ದೈವಕ್ಕೆ ಸಮಾನರಾಗಿದ್ದಾರೆ. ಡಾ|| ಶ್ರೀ ಶಿವಕುಮಾರ ಸ್ವಾಮಿಗಳೆಂದರೆ ಜನತೆಯಲ್ಲಿ ಬಹು ಭಕ್ತಿ **ಜನತೆ ಅವರನ್ನು ನಡೆದಾಡುವ ದೇವರೆಂದೇ ಭಾವಿಸಿದ್ದಾರೆ.** ಅವರ ದರ್ಶನವೆಂದರೆ ಜನರಲ್ಲಿ ಉತ್ಸಾಹ ಉಕ್ಕೇರುತ್ತದೆ. **ಸ್ವಾಮಿಗಳು ಅಂತಃ ಪ್ರಜ್ಞೆಯುಳ್ಳವರು, ಒಳನೋಟವನ್ನು ಸಾಧಿಸಿದವರು ಮತ್ತು ಅನುಭವಿಗಳು ಇವರೊಬ್ಬ ಆಧುನಿಕ ಋಷಿಗಳೆಂದೇ ಹೇಳಬಹುದು.** ಈ ವಿಜ್ಞಾನಯುಗದಲ್ಲಿ ಅವಕಾಶ ಪ್ರಕ್ರಿಯೆಯಲ್ಲಿ ವಿಶ್ವಾಶವಿಲ್ಲದಿದ್ದರೆ, ಕೊನೆಗೆ ಇವರೊಬ್ಬರು ವಿಭೂತಿಪುರುಷ**ರೆಂದಾದರೂ ಹಣತೆ ಮಣಿದು ಹೃದಯ ಸಮರ್ಪಣೆ ಗೈಯ್ಯುವಂತಾಗುತ್ತದೆ** ಮಹರ್ಷಿ ಅರವಿಂದರಮಾತಿನಲ್ಲಿ ಹೇಳುವುದಾದರೆ And you say inspite of all these that he was no Avataraz If you like but at any rate he stands among the few Greatest Vibuter ಭಕ್ತರಿಗೆ ಅವರ ಪಾದ ಸ್ಪರ್ಶವೆಂದರೆ ಪಾಪ ಪರಿಹಾರವೆಂಬ ನಂಬಿಕೆ. ಇವರುವರ್ಷವಿಡೀ ನಡೆಸುವ ಸದ್ಗೋಷ್ಠಿ ದಾಸೊಹಗಳು, ಹನ್ನೆರಡನೆಯಶತಮಾನದ **ಅಣ್ಣ ಬಸವಣ್ಣನವರ ಕಾರ್ಯಗಳನ್ನು ನೆನಪಿಸುತ್ತವೆ.**

ಕಾಡುಮೇಡಾಗಿದ್ದ ಪ್ರದೇಶವನ್ನು, ವಿದ್ಯೆಯಕೇಂದ್ರವಾಗಿಸಿ, ಒಂದು ಮಹಾಸಂಸ್ಥೆಯಾಗಿ ನಿರ್ಮಾಣಮಾಡಿ. ಕಲೆ, ಶಾಸ್ತ್ರ, ಸಾಹಿತ್ಯ, ಸಂಗೀತ, ವಿಜ್ಞಾನ, ಮತ್ತು ದರ್ಮಗಳ ನೆಲೆವೀಡಾಗಿಸಿದವರು, ಇಂದಿನ ಮಹಾಶರಣ-ತಪಸ್ವಿ ಡಾ|| ಶ್ರೀ ಶಿವಕುಮಾರ ಸಾಮಿಗಳವರು. ಶ್ರೀಕ್ಷೇತ್ರವನ್ನು ದರ್ಶಿಸಿದಾಗ, **ಹಿಂದಿನ** ತಕ್ಷಶಿ**ಲೆ, ವಿಕ್ರಮಶಿಲೆ ಹಾಗೂ ನಲಂದವಿಶ್ವವಿದ್ಯಾಲಯಗಳನ್ನು ಜ್ಞಾಪಕಕ್ಕೆ ತರುತ್ತದೆ.** ಡಾ|| ಶ್ರೀ ಶಿವಕುಮಾರ ಸ್ವಾಮಿಗಳೆಂದರೆ ಕ್ರಿಯೆ ಜ್ಞಾನಗಳ ಸಂಗಮ. ಅವರ ಭಾಷಣ ಉಪದೇಶಗಳೆಂದರೆ ಬಹು ಮಹತ್ವವುಳ್ಳವುಗಳು. ಇಂಥಹ ಮಹನಿಯರ ಭವ್ಯ-ದಿವ್ಯ ಬದುಕು ನಾಡಿಗೆ ಆದರ್ಶವಲ್ಲವೇ!

ಸಾಮಾನ್ಯವಾಗಿ ಕೆಲವರು ತಿಳಿದಿರುವ ಹಾಗೆ, ಸ್ವಾಮಿಗಳ ಜೀವನವೆಂದರೆ ಸುಖಮಯ ಜೀವನವೆಂಬ ಭಾವನೆ. ಶ್ರೀಕ್ಷೇತ್ರದಲ್ಲಿದ್ದು ಅವರ ನಿತ್ಯದಿನಚರಿಯನ್ನು ಸಂದರ್ಶಿಸಿದವರಿಗೆ ಆಗುವ ಅನುಭವವೇ ಬೇರೆತೆರನಾದದ್ದು. ಬೆಳಗ್ಗೆ **ಬ್ರಾಹ್ಮಿ ಮುಹೂರ್ತದಲ್ಲೆದ್ದು ನಿತ್ಯಪೂಜಾವಿಧಿಗಳನ್ನು ಮುಗಿಸಿದನಂತರ ನಾಡಿನ**

**ನಾನಾಮೂಲೆಯಿಂದ ಬಂದಿರುವ** ಭಕ್ತರ ಕುಶಲಪ್ರಶ್ನೆ" ಅನಂತರ ಸರ್ಕಾರಿ ಕಾಗದ ಪತ್ರಗಳ ಹಾಗೂ ಭಕ್ತರುಬರೆದ ಪತ್ರಗಳಿಗೆ ಉತ್ತರ. ಮಧ್ಯಾಹ್ನ ಪುನಃ ಪೂಜೆ ಅನಂತರ ಅಧ್ಯಯನ ಶ್ರೀಗಳವರ ಅಧ್ಯಯನ. ನಿರಂತರವಾದುದ್ದು. ಅವರು **ಬಹುಶ್ರುತರು. ಕನ್ನಡ, ಸಂಸ್ಕೃತ, ಇಂಗ್ಲೀಷ್ ಸಾಹಿತ್ಯಗಳಲ್ಲಿ ಆಳವಾದ** ಹಾಗೂ ಅಗಾಧವಾದ ಪಾಂಡಿತ್ಯ. ನೈಜಶರಣ ಜೀವನವನ್ನಿವರಲ್ಲಿ ದರ್ಶಿಸಬಹುದು. ವಯಸ್ಸು ಎಂಭತ್ತೆಂಟರಗಡಿಯನ್ನು ದಾಟಿದ್ದರೂ **ಉತ್ಸಾಹ ಪೂರಿತವಾದ ನಡಿಗೆ. ಕಾಂತಿ ಯುಕ್ತವಾದ ಮುಖಮಂಡಲ, ಎದ್ದುಕಾಣುವ ತ್ರಿಪುಂಡ್ರಧಾರಣ ತೆಳು ಗಾವಿಯ ಉಡುಪು ಕಾವಿಯಮುಂಡಾಸನ. ಎತ್ತರದ ನಿಲುವು ಆದರೆ ವಯಸ್ಸಿನ** ಆಧಿಕ್ಯದಿಂದ **ನಸುಬಾಗಿದನಡೆ. ಯುವಕರನ್ನೂ ನಾಚಿಸುವ ಕ್ರಿಯಾ** ಶೀಲತೆ. ಭಾಷಣವನ್ನು ಕೆಲವರು ಕುಳಿತೇ ಮಾಡುತ್ತಾರೆ. ಇವರು ತಮ್ಮ ಈ ಇಳಿವಯಸ್ಸಿನಲ್ಲೂ, ಎಷ್ಟೇ ದೀರ್ಘಕಾಲವಾದರೂ ನಿಂತೇ ಭಾಷಣ ನೀಡುತ್ತಾರೆ. ಅವರ ಪೂಜೆಯನ್ನು ಕಣ್ಣಾರೆ ಕಂಡವರಿಗೆ, ಹರಿಹರನ ಬಸವರಾಜದೇವರಗಳೆಯ "ಪೂಜಾರಸಮಗ್ರತೆಯ" ಚಿತ್ರಬಾರದಿರದು. ತಾವು ಸ್ವಾಮಿಗಳೆನ್ನುವ ಆಹಮಿಕೆಯಿಲ್ಲ ಈ ತ್ರಿವಿಧ ದಾಸೋಹಮೂರ್ತಿಗಳಲ್ಲಿ. ಬಸವಣ್ಣನವರ ಪ್ರಾರ್ಥನೆಯೆಂತೆಯೇ ಅವರ ಪ್ರಾರ್ಥನೆ.

" ಕರಗಿಸಿ ಎನ್ನ ಕಾಳಿಕೆಯ ಕಳೆಯಯ್ಯಾ
ಒರಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿನೋಡಯ್ಯಾ
ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣೆಯಮಾಡಿ
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿಸಲಹು
ಕೂಡಲಸಂಗಮದೇವಾ"

ಈರೀತಿ ಅವರ ಪ್ರಾರ್ಥನೆ. ಜಗತ್ತಿನ ಯಾವದಾರ್ಶನಿಕರ, ಮತ ಸ್ಥಾಪಕರ ಜೀವನ ಹೂವಿನಸುಪ್ಪತ್ತಿಗೆಯಾಗಿದ್ದಿತು ? ಭಗವಾನ್ ಬುದ್ಧ, ಏಸುಕ್ರಿಸ್ತ, ಮಹಮದ್‌ಪೈಗಂಬರ್, ಶಂಕರ, ರಾಮಾನುಜ, ಬಸವಣ್ಣ. ಹಾಗೂ ಆಧುನಿಕ ಮಹಾತ್ಮ ಗಾಂಧೀಜಿ ಇವರುಗಳ ಜೀವನವನ್ನು ವಿಶ್ಲೇಷಿಸಿದರೆ ಅವರ ಜೀವನ ಹೋರಾಟದ ಅರಿವಾಗುತ್ತದೆ. 'ಹರತನ್ನ ಭಕ್ತರತಿರಿವಂತೆ ಮಾಡುವ, ಅರೆದು ನೋಡುವ ಸುವರ್ಣದಂತೆ........... ಇವುಗಳಾವುದಕ್ಕೂ ಬೆದರದೆ ಬೆಚ್ಚದೆಯಿದ್ದ ಶಿಖರವಿಡಿದೆತ್ತಿಕೊಂಬ" ಎನ್ನುವ ಮಾತು ಸತ್ಯ-ಸತ್ಯವಾದುದು. ಈ ಹಳಕಿನಲ್ಲಿ ನೋಡಿದಾಗ ಈ ತ್ರಿವಿಧ



ದಾಸೋಹಮೂರ್ತಿ ಡಾ|| ಶ್ರೀ ಶಿವಕುಮಾರಮಹಾಸ್ವಾಮಿಗಳವರ ಜೀವನದಲ್ಲಿ ಹಲವಾರು ಏರಿಳಿತಗಳಾಗಿವೆ. ಅವುಗಳನ್ನೆಲ್ಲಾ ದೃಢನಿಷ್ಠೆಯಿಂದ, ಧೈರ್ಯದಿಂದ, ತಾಳ್ಮೆಯಿಂದ ಮತ್ತು ತಮ್ಮ **ಲಿಂಗ ನಿಷ್ಠೆಯ ತಪಸ್ಸಿನಿಂದ, ಆ ನಂಜನ್ನೆಲ್ಲಾ ಉಂಡು ನಂಜುಂಡೇಶ್ವರರಾಗಿದ್ದಾರೆ.** ಅವರ ಆದರ್ಶ ಜೀವನ ನಮ್ಮ ರಾಷ್ಟ್ರದ ಜನತೆಗೆ ದಾರಿದೀಪವಾಗಿದೆ.

'ಶ್ರೀ ಸಿದ್ಧಗಂಗೆ' ಕರ್ನಾಟಕ ಜನತೆಯ ಆಧ್ಯಾತ್ಮಿಕ ಸಂಪತ್ತು. ಇಂದಿನ ನವನಾಗರೀಕತೆಯ ಗುಂಗಿನ ಸೋಂಕಿನಲ್ಲಿ, ಯುವಜನ ಮುಂಗಾಣ್ಕೆಯನ್ನು ಕಾಣದೆ ಬಳಲುತ್ತಿರುವ ಸಮಯದಲ್ಲಿ **ಶ್ರೀ ಕ್ಷೇತ್ರ ಯುವಕರಿಗೆ ನಂದದ ನಂದಾದೀಪ ವಾಗಿದೆ.** ಈ ಸಿದ್ಧಿಯ ತಾಣ ಜಾತಿ - ಮತಗಳ ಸೋಂಕಿಲ್ಲದೆ, ಎಲ್ಲರಿಗೂ ಆಶ್ರಯ ನೀಡಿ, ವಿದ್ಯಾದಾನಮಾಡಿ ಉತ್ತಮಜನಾಂಗವನ್ನು ರೂಪಿಸುತ್ತಿರುವುದು ನಾಡಿನ ಭಾಗ್ಯ. ಶ್ರೀ ಕ್ಷೇತ್ರ ಇನ್ನೂ ಉಜ್ವಲವಾಗಿ ಬೆಳೆದು, ಅನೇಕ ಶತ ಸಂವತ್ಸರಗಳು ನಾಡಿನ ಜ್ಞಾನ ಜ್ಯೋತಿಯನ್ನು ಬೆಳಗಿಸುವ ನಂದಾದೀಪವಾಗಲೆಂದು ನಾವೆಲ್ಲರು ಸಚ್ಚಿದಾನಂದ ಸ್ವರೂಪಿಯಾದ ಭಗವಂತನನ್ನು ಪ್ರಾರ್ಥಿಸೋಣ.

**ಸತ್ಯಂ ಶಿವಂ ಸುಂದರಂ**

---

**ಎನ್. ರಾಜಶೇಖರಯ್ಯ,** ನಿ.ಮು. ಶಿಕ್ಷಕರು, ಆರ್.ಆರ್. ಪ್ರೌಢಶಾಲೆ
ಅಂಕನಹಳ್ಳಿಮಠ, ಕುಣಿಗಲ್ ತಾಲ್ಲೂಕು,



# ಕ್ರಾಂತಿಯೋಗಿ ಶ್ರೀ ಸ್ವಾಮಿ ವಿವೇಕಾನಂದ

( 12–1–1863 ರಿಂದ 4–7–1902 )

ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ಸ್ವಾಮಿವಿವೇಕಾನಂದರವರು ವಿಶಿಷ್ಟವಾದ ಸ್ಥಾನವನ್ನು ಪಡೆದಿದ್ದಾರೆ. ಭಾರತೀಯ ಧಾರ್ಮಿಕವ್ಯಕ್ತಿಗಳ ಸಾಲಿನಲ್ಲಿ ವಿವೇಕಾನಂದರವರ ಹೆಸರು ಹಿಮಾಲಯದಂತೆ ಎತ್ತರವಾಗಿ ಕಂಗೊಳಿಸುತ್ತದೆ. ಬಾಲ್ಯದಿಂದಲೇ ಧಾರ್ಮಿಕ ಗ್ರಂಥಗಳ ಮೇಲೆ ಅಧಿಕಾರಯುತವಾಗಿ ಮಾತಾಡುವ ಶಕ್ತಿ ಹೊಂದಿದ್ದ ವಿವೇಕನಂದರಿಗೆ ರಾಮಕೃಷ್ಣರ ಮಾರ್ಗದರ್ಶನ ಸಿಕ್ಕಾಗ ತೈಲ ತುಂಬಿದ ಬತ್ತಿಗೆ ಜ್ಯೋತಿ ಬೆಳಗಿಸಿದಂತೆ ಆಗಿ ವಿವೇಕನಂದರವರ ಜ್ಞಾನ ಪ್ರಕಾಶ ಜಗತ್ತಿನಾದ್ಯಾಂತ ಬೆಳಗಲು ಅವಕಾಶ ಸಿಕ್ಕಂತಾಯಿತು.

ಖೇತ್ರಿರಾಜರಿಂದ ಮೊಟ್ಟಮೊದಲ ಸಾರಿ "ಸ್ವಾಮಿ ವಿವೇಕನಂದ" ಎಂದು ಸಂಬೋಧಿಸಲ್ಪಟ್ಟ ವಿವೇಕನಂದರವರ ಮೊದಲ ಹೆಸರು ನರೇಂದ್ರನಾಥನೆಂದು 1(63 ನೆಯ ಇಸ್ವಿಯ ಜನವರಿ 12 ರಂದು ಪವಿತ್ರ ಮಕರ ಸಂಕ್ರಾಂತಿಯ ದಿನ ಹುಟ್ಟಿದ ವಿವೇಕನಂದರವರ ತಂದೆ ಕಲ್ಕತ್ತೆಯ ಪ್ರಮುಖ ವಕೀಲರಾಗಿದ್ದ ವಿಶ್ವನಾಥದತ್ತ ಹಾಗೂ ತಾಯಿ ಭುವನೇಶ್ವರಿದೇವಿ. ತಂದೆ ತಾಯಿಗಳು ಮಗುವಿಗೆ ನರೇಂದ್ರನಾಥನೆಂದು ಹೆಸರಿಟ್ಟು. ಆ ಮಗುಶಿವನಿಗೆ ತನ್ನ ಪ್ರಾರ್ಥನೆಗಳ ಕೊಡುಗೆಯೇಯೆಂದು ತಾಯಿ ನಂಬಿದ್ದಳು.

ಮಗು ನೆರೆಹೊರೆಯವರ ಅತ್ಯಂತ ಪ್ರೀತಿಯ ಮಗುವಾಗಿ ಬೆಳೆದಿದ್ದಲ್ಲದೇ ಆಡಿಗಳಲ್ಲಿಯೂ ಸಹಿತ ಎಲ್ಲರಿಗಿಂತ ಮುಂದೆ ಇದ್ದು ಜನರ ಗಮನವನ್ನು ಸೆಳೆದಿದ್ದ. ಮಗುವಾಗಿದ್ದಾಗಲೂ ಕೂಡಾ ಚಿಂತನಾತ್ಮಕ ಜೀವನ ನಡೆಸಿದಲ್ಲದೇ ಆಹ್ವಾನಗಳನ್ನು ಸ್ವೀಕರಿಸುವ ಮನೋಭಾವನೆಯನ್ನು ಹೊಂದಿ ಭಯವೇ ಗೊತ್ತಿಲ್ಲದವನಾಗಿ ಇದ್ದ.

ನರೇಂದ್ರನಾಥನು ಚಿಂತನಾಶೀಲ ವ್ಯಕ್ತಿತ್ವವನ್ನು ಹೊಂದಿದ್ದನಲ್ಲದೇ ಯಾವುದನ್ನು ಮೂಡನಂಬಿಕೆಯಿಂದ ನಂಬುತ್ತಿರಲಿಲ್ಲ. ದೇವರ ಅಸ್ತಿತ್ವದ ಪ್ರಶ್ನೆ ಆತನನ್ನು ಆತಿಯಾಗಿ ಕಾಡಿತ್ತಲ್ಲದೇ ಆ ಪ್ರಶ್ನೆಗೆ ಉತ್ತರವನ್ನು ಹುಡುಕುವುದರ ಸಲುವಾಗಿ ಅಲೆದಾಡಿದ. ಪ್ರಶ್ನೆಗೆ ತೃಪ್ತಿದಾಯಕ ಉತ್ತರ ದೊರೆಯದಿದ್ದಾಗ ನಿರಾಸೆಯಿಂದ ಇರುವ ಸಮಯದಲ್ಲಿ ಶ್ರೀ ರಾಮಕೃಷ್ಣರ ದರ್ಶನವಾಗಿ ಅವರಲ್ಲಿ ತನ್ನ ಪ್ರಶ್ನೆಗೆ ಉತ್ತರ ಹಾಗೂ ತನ್ನ ಸಮಸ್ಯೆಗೆ ಪರಿಹಾರ ಕಂಡುಕೊಂಡ.



ಐದು ವರ್ಷಗಳ ಕಾಲ ನರೆಂದ್ರನಾಥ ರಾಮವೃಷ್ಣರ ಸನ್ನಿಧಾನದಲ್ಲಿ ಕಳೆದಾಗ ಆತನ ಜ್ಞಾನ ಪ್ರಕಾಶ ಪಡೆದವನಾಗಿ ಜನರಿಗೆ ಬೆಳಕು ನಿಡುವ ಸಮರ್ಥ ಶೀಲನಾದ.

ರಾಮಕೃಷ್ಣರು 1886 ರಲ್ಲಿ ಸ್ವರ್ಗಸ್ಥರಾದಾಗ ನರೇಂದ್ರನಾಥನಿಗೆ ಇನ್ನೂ 23 ವರ್ಷಗಳು ತುಂಬಿರಲ್ಲಿಲ್ಲ. ರಾಮಕೃಷ್ಣರ ಬೋಧನೆಗಳನ್ನು ಜನರಿಗೆ ತಲುಪಿಸುವ ಜವಾಬ್ದಾರಿ ಆತನ ಹೆಗಲ ಮೇಲೆ ಬಿತ್ತು. ಮನೆಯನ್ನು ತ್ಯಾಗ ಮಾಡಿದ ಸ್ವಾಮಿ ವಿವೇಕನಂದನಾದ; ಮಠವನ್ನು ಸ್ಥಾಪಿಸಿದ; ಭಾರತದಾದ್ಯಂತ ಪ್ರಯಾಣ ಮಾಡಿದ ಮಾತೃಭೂಮಿಯ ಸಮಸ್ಯೆಗಳನ್ನು ಅರ್ಥ ಮಾಡಿಕೊಂಡು ಸಮಸ್ಯೆಗಳಿಗೆ ಪರಿಹಾರಗಳನ್ನು ಹುಡುಕಿಕೊಂಡು ಜನರಿಗೆ ದಾರಿ ದೀಪವಾಗಲು ಪ್ರಯತ್ನಿಸಿದ. ಇಡಿ ದೇಶವೆ ಆತನ ಭೋಧನೆಯನ್ನು ಕಿವಿಗೊಟ್ಟು ಕೇಳಿತು.

1893 ನೇ ಇಸ್ವಿ ಮೇ ದಲ್ಲಿ ಅಮೇರಿಕಾದ ಚಿಕಾಗೋ ನಗರದಲ್ಲಿ ನಡೆದ "ಜಾಗತಿಕ ಧರ್ಮಸಮ್ಮೇಳನದಲ್ಲಿ ಭಾಗವಹಿಸಿ ಅಲ್ಲಿಯ ಸಹೋದರ ಸಹೋದರಿಯರಿಗೆ ಹಿಂದೂ ಧರ್ಮದ ತಿರುಳು ತಿಳಿಸಿ ಜಾಗತಿಕ ಮಹತ್ವ ಪಡೆದರು. ಅಮೇರಿಕೆಯಲ್ಲಿ ಅಷ್ಟೇ ಅಲ್ಲದೇ ಯುರೋಪ್ ಖಂಡಕ್ಕೂ ಪ್ರಯಾಣ ಕೈಗೊಂಡರು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಧರ್ಮ ಪ್ರಸಾರ ಮಾಡಿ 1897 ರಲ್ಲಿ ಭಾರತಕ್ಕೆ ಮರಳಿದಾಗ ಅವರ ಧರ್ಮಸೇವೆಗಾಗಿ ಭಾರತೀಯರು ಭಿನ್ನವತ್ತಳಿಕೆ ಅರ್ಪಿಸಿದರು. ಅವುಗಳಿಗೆ ಉತ್ತರವಾಗಿ ಅವರು ಈ ರಿಂತಿ ಹೇಳಿದರು "ವೇದಾಂತ ತತ್ವಗಳನ್ನು ಅರಣ್ಯಗಳಿಂದ, ಗುಹೆಗಳಿಂದ, ಪುಸ್ತಕಗಳಿಂದ ಬಿಡುಗಡೆ ಮಾಡಿ ದಿನ ನಿತ್ಯದ ಜೀವನದಲ್ಲಿ ಅವುಗಳನ್ನು ದೇಶ ಬಾಂಧವರು ಅನುಷ್ಟಾನಕ್ಕೆ ತರಬೇಕು".

ಕರ್ಮಯೋಗದ ಸಾರವನ್ನು ಅವರು ಈ ರೀತಿ ಹೇಳುತ್ತಾರೆ. "ಮಾನವನು ಸಂಸಾರದಲ್ಲಿರಬೇಕು; ಅವನ ಹೃದಯ ಪರಮಾತ್ಮನಲ್ಲಿರಬೇಕು; ಕೈಗಳು ಕೆಲಸದಲ್ಲಿ ನಿರತವಾಗಿರಬೇಕು.

ಸ್ವಾಮಿ ವಿವೇಕನಂದರವರು ದೇಶದ ಬಾಂಧವರಿಗೆ ಅದರಲ್ಲೂ ಯುವಕರಿಗೆ Arise Awak and stop not till goal is reached" ಎಂದು ಕರೆ ನಿಡಿ ಮಾತೃಭೂಮಿಗೆ ಸ್ಫೂರ್ತಿಯ ಸೆಲೆಯಾದರು ನನಗೆ ಬೇಕಾಗಿರುವುದು ಕಬ್ಬಿಣದ ಮಾಂಸ ಖಂಡಗಳ ಸ್ಟೀಲಿನನರಗಳ ಅಂತಹದೇ ಗಟ್ಟಿಯಳ್ಳ ಮನಸಿನವರು ಎಂದು ಹೇಳಿ ಜಗತ್ತಿಗೆ ಮಾನವನಾಗಿ ಬಂದ ಮೇಲೆ ಬಂದಿದ್ದರ ಕುರುಹುವನ್ನು ಬಿಟ್ಟುಹೋಗುವಹಾಗೆ ಒಳ್ಳೆಯದನ್ನು ಮಾಡಬೇಕು ಎಂದು ಹೇಳಿದ್ದಾರೆ. ಇಲ್ಲದಿದ್ದರೆ ಗಿಡಕಲ್ಲುಗಳಿಗೂ ಸಮಾನ್ಯ ಏನು ವ್ಯತ್ಯಾಸ."

ಯುವಕರಿಗೆ ಹೇಳುತ್ತಾ ಅವರು ಸ್ವರ್ಗಕ್ಕೆ ನೀವು ಫುಟ್‌ಬಾಲ್ ಆಡುವುದರಿಂದ ಹತ್ತಿರದವರಾಗುತ್ತೀರಿ ವಿನಹ ಗೀತೆಯನ್ನು ಓದುವುದರಿಂದ ಅಲ್ಲ ಎಂದು ಹೇಳಿದರು. ಮಹಿಳೆಯರ ಬಗ್ಗೆ ಹೇಳುತ್ತಾ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರ ಸ್ಥಿತಿ ಸುಧಾರಿಸದೇ ಜಗತ್ತಿನ ಕಲ್ಯಾಣ ಸಾಧ್ಯವಿಲ್ಲ ಎಂದು ಹೇಳಿದರು. "ಪಕ್ಷಿಗೆ ಒಂದೇ ರೆಕ್ಕೆಯಿಂದ ಹಾರಲು ಸಾಧ್ಯವಿಲ್ಲ."

ಸ್ವಾಮಿ ವಿವೇಕನಂದರನ್ನು ಒಮ್ಮೆ ನಿಮ್ಮ ದೇಶ ಯಾವುದು ? ನಿಮ್ಮ ಧರ್ಮ ಯಾವುದು? ಎಂದು ಕೇಳಿದಾಗ ಅವರು ಉತ್ತರಿಸಿದರಂತೆ "Truth my Religion, universe my Country" ಇಂತಹ ಉತ್ತರ ಸ್ವಾಮಿ ವಿವೇಕನಂದರಂತಹ ವಿಶ್ವಮಾನವರಿಂದ ಮಾತ್ರ ಬರಲು ಸಾಧ್ಯ. ಅವರು ಬೋಧಿಸಿದ ಧರ್ಮವನ್ನು ಮಾನವೀಯ ಧರ್ಮವೆನ್ನಬಹುದು.

ಎಲ್ಲಕ್ಕೂ ಮೊದಲ ಪೂಜೆ ನಮ್ಮ ಸುತ್ತಲಿರುವವರ ಪೂಜೆ. ಅವರೇ ನಮ್ಮ ದೇವರು ಈ ಜಗತ್ತಿನಲ್ಲಿ ಹೊಟ್ಟೆಗೆ ಆಹಾರವನ್ನು ಕೊಡುವ ದೇವರಲ್ಲಿ ನಂಬಿಕೆ ಇಡಬೇಕೇ ಹೊರತು ಸ್ವರ್ಗದಲ್ಲಿ ಆನಂದವನ್ನು ಕೊಡುವ ದೇವರಲ್ಲ.

"ಬಡತನ ರೋಗ ರುಜಿನಗಳಲ್ಲಿ ಅಧ್ಯಾತ್ಮಿಕತೆಯೆಂಬುದಿಲ್ಲ. ಉಪವಾಸದಿಂದ ನರಳುತ್ತಿರುವವರಿಗೆ ತತ್ವೋಪದೇಶ ಮಾಡುವುದು ಒಂದು ಅಪಮಾನ".

ಕಲಕತ್ತೆಯ ಹತ್ತಿರದ ಬೇಲೂರು ಮಠದಲ್ಲಿ ಕೇಂದ್ರ ಕಛೇರಿಯಿರುವಂತೆ ಸ್ವಾಮಿ ವಿವೇಕನಂದರವರು ರಾಮಕೃಷ್ಣ ಮಠ ಹಾಗೂ ಮಿಶನ್ ಸ್ಥಾಪಿಸಿ ದೇಶದ ಜನತೆಗೆ ಬೋಧನೆ ನಿಡುವುದರಲ್ಲಿಯೇ ಕಾಲಕಳೆದರು. 1902 ರ ಜುಲೈ 4 ರಂದು ಅವರು ಮಹಾಸಮಾಧಿ ಸೇರಿದಾಗ ಅವರಿಗಿನ್ನು 40 ವರ್ಷ ಆಗಿರಲಿಲ್ಲ. ಇಂತಹ ಮಹಾ ವ್ಯಕ್ತಿಗಳ ಕಾಲವನ್ನು ನಾವು ಕ್ಯಾಲೆಂಡರ್ ವರ್ಷಗಳ ಮುಖಾಂತರ ಅಳೆಯಲು ಸಾಧ್ಯವಿಲ್ಲ. ವಿವೇಕನಂದರವರು ಕಾಲಾತೀತರು. ವಿಶ್ವಮಾನವರು.

---

**ಮಹಾಂತೇಶ ಮಲ್ಲನಗೌಡರ,** ಕೊಪ್ಪಳ-583 231



## ೨೧ ನೇ ಶತಮಾನಕ್ಕೆ ಪೂರ್ವಸಿದ್ಧತೆ

ಡಾ. ವಿ. ಎಸ್. ಪೆಂಡಕೂರ್

ಯಾವುದೇ ಸಂಸ್ಥೆಯಲ್ಲಿ ನಡೆಯುವ ಕೆಲಸದ ಗುಣಮಟ್ಟಕ್ಕೂ, ಅದರ ಒಡೆತನಕ್ಕೂ ನೇರವಾದ ಸಂಬಂಧವೇನೂ ಇಲ್ಲ, ಸಂಸ್ಥೆಯ ಸ್ಥಾಪನೆಯ ಹಂತದಲ್ಲಿ ತೋರಿಸುವ ಎಚ್ಚರವನ್ನೇ ಅದರ ಗುಣಮಟ್ಟವನ್ನು ಕಾಪಾಡಿಕೊಳ್ಳುವ ಬೆಳೆಸುವ ಕೆಲಸದಲ್ಲಿಯೂ ತೋರಿಸಬೇಕಾಗುತ್ತದೆ. ಈ ಮಾತು ಒಟ್ಟು ದೇಶದ ಆರ್ಥಿಕ ವ್ಯವಸ್ಥೆಗೂ ಅನ್ವಯವಾಗುತ್ತದೆ. ಸಾಮಾಜಿಕನ್ಯಾಯ ಮತ್ತು ಗುಣಮಟ್ಟಗಳ ಪರಿಪಾಲನೆಗಳ ನಡುವೆ ಸಮತೋಲನ ತರಲು ಪ್ರಯತ್ನಿಸುತ್ತಿರುವ ಭಾರತದಂತಹ ದೇಶಗಳು ವಿಶ್ವಮಾರುಕಟ್ಟೆಯಲ್ಲಿ ಎದುರಿಸುತ್ತಿರುವ ಹಾಗೂ ಎದುರಿಸಬೇಕಾಗುವ ತೊಂದರೆಗಳು ಹತ್ತು ಹಲವು.

ಇಂದಿನ ಸನ್ನಿವೇಶವನ್ನು ಅಪರಿಮಿತವಾದ ವ್ಯಾಪಾರ ಮತ್ತು ಶಕ್ತಿಹೀನ ಸರ್ಕಾರ ಎಂದು ವರ್ಣಿಸಬಹುದು. ದಿನಕಳೆದಂತೆ ವಿದೇಶೀ ಕೈಗಾರಿಕಾ ಸಂಸ್ಥೆಗಳು ಹಾಗೂ ವ್ಯಾಪಾರ ನಿಗಮಗಳು ಹೆಚ್ಚು ಹೆಚ್ಚು ಜನರನ್ನು ಕೆಲಸಕ್ಕೆ ತೆಗೆದುಕೊಳ್ಳುತ್ತವೆ. ಆಕರ್ಶಕವಾದ ಸಂಬಳ ಸಾರಿಗೆಗಳನ್ನು ನೀಡುತ್ತವೆ. ಲಾಭಗಳಿಕೆಯೊಂದೇ ಅವುಗಳ ಉದ್ದೇಶವಾಗಿರುವುದರಿಂದ ಸಮಾಜಿಕನ್ಯಾಯ, ಮಿಸಲಾತಿ ಮುಂತಾದ ಸಂಗತಿಗಳ ಬಗ್ಗೆ ಅವರು ತಲೆಕೆಡೆಸಿಕೊಳ್ಳುವುದಿಲ್ಲ. ಇದರಿಂದ ಕೊನೆಗೊಂದು ದಿನ ಸರ್ಕಾರಿ ಕೆಲಸಗಳಲ್ಲಿರುವವರು ಅಸಮರ್ಥರೂ, ಅಶಕ್ತರೂ ಆಗುವುದು ಅನಿವಾರ್ಯವಾಗುತ್ತದೆ.

ಇಷ್ಟೇಅಲ್ಲ, ವಿದೇಶಿ ಸಂಸ್ಥೆಗಳು ತಾವು ತಯಾರಿಸಿದ ಐಷಾರಾಮದ ಭೋಗವಸ್ತುಗಳನ್ನು ಆತಿಹೆಚ್ಚು ಬೆಲೆಗೆ ಇಲ್ಲಿ ಮಾರುತ್ತವೆ. ಇಲ್ಲಿನ ಶ್ರೀಮಂತ ವರ್ಗ ಅವುಗಳ ಗಿರಾಕಿಗಳಾಗುತ್ತಾರೆ. ಆದರೆ ಇಲ್ಲಿ ತಯಾರಾದ ವಸ್ತುಗಳು ವಿದೇಶೀ ಮಾರುಕಟ್ಟೆಯಲ್ಲಿ ಸ್ಪರ್ಧೆ ಎದುರಿಸಬೇಕಾಗಿರುವುದರಿಂದ ಕಾಸಿಗೆ ಪಂಚೇರಿನಂತೆ ಮಾರಾಟವಾಗುತ್ತವೆ. ಒಂದು ಯಂತ್ರದ ನೂರೆಂಟು ಬಿಡಿಭಾಗಗಳನ್ನು ಎಲ್ಲೆಲ್ಲೋ ತಯಾರಿಸಿ ಮತ್ತೆಲ್ಲೋ ತಯಾರಾಯಿತೆಂದು ಮಾರುವ ಈ ಸಂಸ್ಥೆಗಳು ಸರ್ಕಾರವನ್ನು ಕೆಳ-ಗುರುಳಿಸುವಷ್ಟು ಸಮರ್ಥವಾಗಿರುತ್ತವೆ. ಯಾರಾದರೂ ರಾಜಕಾರಣಿಗಳು ತುಟಿ ಪಿಟಿಕ್ ಎಂದರೆ, ಚುನಾವಣೆಗಳಲ್ಲಿ ಆವರ ಪಕ್ಷವನ್ನು ಸೋಲಿಸುತ್ತಾರೆ. ಇನ್ನೂ ಎದುರಿಸಿದರೆ ಒಂದು ವಾರದಲ್ಲಿ ಕಾರ್ಖಾನೆಯ ಗಂಟುಮೂಟೆ ಕಟ್ಟಿಕೊಂಡು ಬೇರೊಂದು ದೇಶಕ್ಕೆ ಹೊರಟುಹೋಗುತ್ತಾರೆ. ಅವರ ಹಿಂದೆ ನಿರುದ್ಯೋಗಿಗಳ ತಂಡವೇ ಉಳಿಯುತ್ತದೆ.

ಈ ಪರಿಸ್ಥಿತಿ ರಾಬರ್ಟ್ ಕ್ಲೈವ್ ಕಾಲದ ವಸಾಹತು ಶಾಹಿಗಿಂತ ಧಾರುಣವಾದುದು. ಏಕೆಂದರೆ ಇಲ್ಲಿಯ ಲಾಭದ ಪ್ರತಿಯೊಂದು ಕಾಸು ಕೂಡ ಹೊರದೇಶಗಳಿಗೇ ಹೋಗುತ್ತದೆ.

ಹಾಂಕಾಂಗ್, ಸಿಂಗಪುರ್, ಚೀನಾ, ಜಪಾನ್, ಕೊರಿಯಾ ಮುಂತಾದ ಚಿಕ್ಕಪುಟ್ಟ ರಾಷ್ಟ್ರಗಳು ಇಂದು ಜಗತ್ತಿನ ಅತ್ಯಂತ ಶ್ರೀಮಂತ ರಾಷ್ಟ್ರಗಳಾಗಿರುವುದು ಅವುಗಳ ಉತ್ಪಾದನೆಯ ಗುಣಮಟ್ಟದ ಮೇಲಿನ ನಿಯಂತ್ರಣ ಹಾಗೂ ಬಿಡುವಿರದ ಪ್ರಾಮಾಣಿಕ ದುಡಿಮೆಗಳಲ್ಲಿ ಇದರ ಗುಟ್ಟಿದೆ.

ಭಾರತ ಇಂದು ಹಲವು ವಿಷಯಗಳಲ್ಲಿ ತಜ್ಞರಾದವರನ್ನು ಬೇರೆ ಬೇರೆ ದೇಶಗಳಿಗೆ ರಫ್ತು ಮಾಡುತ್ತಿರುವುದರಲ್ಲಿ ಒಂದು ಹೊಸ ಭರವಸೆಯಿದೆ. ಇನ್ನೂ ಮೂವತ್ತು-ನಲ್ವತ್ತು ವರ್ಷಗಳಲ್ಲಿ ಅನೇಕ ದೇಶಗಳಲ್ಲಿ ಭಾರತೀಯ ಉದ್ಯೋಗಿಗಳೇ ಬಹು ಸಂಖ್ಯಾತರಾಗುವುದರಿಂದ, ಭಾರತದ ಮೇಲುಗೈ ಸಾಧಿತವಾಗುವ ಸಂಭವವಿದೆ.

ಈ ದಿನಗಳಲ್ಲಿ ಸರಿಯಾದ ಮಾಹಿತಿಯನ್ನು ಹೊಂದಿರುವುದು ಬೆಳವಣಿಗೆಗೆ ಅನಿವಾರ್ಯ. ಪಾಶ್ಚಾತ್ಯ ದೇಶಗಳಲ್ಲಿ ಕಂಪ್ಯೂಟರ್, ಎಲೆಕ್ಟ್ರಾನಿಕ್ ಮೇಲೆ ಮುಂತಾದವುಗಳ ನೆರವಿನಿಂದ ಖಚಿತವಾದ ಮಾಹಿತಿಯು ಅಗ್ಗದ ಬೆಲೆಗೆ ಲಭ್ಯವಿದ್ದರೆ ಭಾರತದಲ್ಲಿ ಸಾಮಾನ್ಯ ಜನರಿಗೆ ಸಿಗುವ ಮಾಹಿತಿ ನಂಬಲರ್ಹವಲ್ಲ ಹಾಗೂ ಬಹಳ ದುಬಾರಿ. ಆದ್ದರಿಂದ ಇಪ್ಪತ್ತೊಂದನೆಯ ಶತಮಾನದಲ್ಲಿ ಭಾರತವು ಮಾಹಿತಿ ತಂತ್ರಜ್ಞಾನವನ್ನು ಸಂಪಾದಿಸಿಕೊಳ್ಳುವುದು ಅತ್ಯಗತ್ಯ.

( ಸೌಜನ್ಯ:- ಬಿತ್ತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಕಮಲಾಪುರ-೫೮೩ ೨೨೧ )

ಡಾ. ವಿ. ಎಸ್. ಪೆಂಡಕೂರ್
ಪ್ರಾಧ್ಯಾಪಕರು

ಪ್ರಾದೇಶಿಕ ಯೋಜನೆ ಮತ್ತು ನಗರ ನಿರ್ಮಾಣ
ವ್ಯಾಂಕೂವರ್ ವಿಶ್ವವಿದ್ಯಾಲಯ
ಕೆನಡಾ ( ಯು. ಎಸ್. ಎ )



# ವಿಜ್ಞಾನಿಗಳ ದೃಷ್ಟಿಯಲ್ಲಿ ದೇವರು

ಹಿರಿಯ ಆಧ್ಯಾತ್ಮವಾದಿಗಳು, ಸಂತರು, ಋಷಿಗಳು ಮತ್ತು ಯೋಗಿಗಳೆಲ್ಲರೂ ಸಹ ಈ ಮಹಾ ವಿಶ್ವದ ಆಗುಹೋಗುಗಳಿಗೆ ಕಾರಣ ಕರ್ತನಾದ ಒಬ್ಬ ದೇವರಿದ್ದಾನೆಂದು ಹಿಂದಿನಿಂದಲೂ ಸಾರುತ್ತಾ ಬಂದಿದ್ದಾರೆ. ಇತ್ತೀಚಿನವರಾದ ಶ್ರೀ ರಾಮಕೃಷ್ಣ ಪರಮಹಂಸ, ಶ್ರೀ ವಿವೇಕಾನಂದ, ಶ್ರೀ ರಮಣಮಹರ್ಷಿ ಮತ್ತು ಶ್ರೀ ಅರವಿಂದಘೋಷರಂತಹ ಶ್ರೇಷ್ಠ ಯೋಗಿವರ್ಯರೂ ಸಹ ತಮ್ಮ ಅನುಭವದ ಮೂಲಕ ದೇವರ ಅಸ್ತಿತ್ವವನ್ನು ಖಚಿತಪಡಿಸಿದ್ದಾರೆ. ಸ್ವಾಮಿ ವಿವೇಕಾನಂದರು ಕಾಲೇಜಿನ ಯುವಕನಾಗಿದ್ದ ಸಂದರ್ಭದಲ್ಲಿ ಮೊದಲ ಬಾರಿಗೆ ಶ್ರೀ ರಾಮಕೃಷ್ಣ ಪರಮಹಂಸರನ್ನು ಭೇಟಿ ಮಾಡಿದಾಗ "ನೀವು ದೇವರನ್ನು ನೋಡಿದ್ದಿರಾ" ಎಂದು ನೇರವಾಗಿ ಪ್ರಶ್ನಿಸಿದಾಗ, ಶ್ರೀ ರಾಮಕೃಷ್ಣ ಪರಮಹಂಸರು "ನಾನು ನೋಡಿದ್ದೇನೆ. ಅಲ್ಲದೆ ನಾನು ನಿನ್ನೊಂದಿಗೆ ಹೇಗೆ ಮಾತನಾಡುತ್ತಿದ್ದೀನೋ ಹಾಗೆ ದೇವರೊಂದಿಗೂ ಮಾತನಾಡಬಹುದು" ಎಂಬ ಖಚಿತವಾದ ಉತ್ತರವನ್ನು ಕೊಟ್ಟುದಲ್ಲದೆ ಅವರಿಗೆ ಪರಮಾತ್ಮನ ಸಾಕ್ಷಾತ್ಕಾರ ಮಾಡಿಸಲು ದಾರಿತೋರಿದ ಮಹಾನುಭಾವರು. ಈ ಶತಮಾನದಲ್ಲಿಯೇ ಇದ್ದು ಇಡೀ ವಿಶ್ವಕ್ಕೇ ಆಧ್ಯಾತ್ಮ ಮಾರ್ಗದರ್ಶನ ಮಾಡಿಸಿದ ಈ ವಿವೇಕಾನಂದರಂತಹ ಮಹಾತ್ಮರು ದೇವರ ಇರುವಿಕೆಯ ಬಗ್ಗೆ ಖಚಿತವಾಗಿ ತಿಳಿಸಿದ್ದರೂ ಸಹ, ನಮ್ಮಲ್ಲಿ ವೈಜ್ಞಾನಿಕ ಮನೋಭಾವನೆ ಬೆಳೆಸಿಕೊಂಡಿದ್ದೇವೆ ಎಂದು ತಿಳಿದುಕೊಂಡಿರುವ ಕೆಲವರು ದೇವರ ಇರುವಿಕೆಯನ್ನು ನಂಬುತ್ತಿಲ್ಲ. ಅಷ್ಟೇ ಅಲ್ಲದೆ ದೈವದ ಕಲ್ಪನೆಯನ್ನು ಮೂಡಿಸುವ ವೇದ, ಉಪನಿಷತ್ತುಗಳನ್ನೂ ಬೂಸಾ ಸಾಹಿತ್ಯವೆಂದು ಅಲ್ಲಗಳೆಯುವ ಜನರಿದ್ದಾರೆ.

ಆದರೆ ವಾಸ್ತವಿಕವಾಗಿ ಸ್ವತಃ ವಿಜ್ಞಾನಿಗಳು ದೇವರ ಇರುವಿಕೆಯ ಬಗ್ಗೆ ತಮ್ಮ ಪ್ರಯೋಗಗಳ ಅನುಭವದಿಂದ ತಮ್ಮದೇ ಆದ ಅಭಿಪ್ರಾಯವನ್ನು ಹೊಂದಿದ್ದಾರೆ. ಈ ಅಭಿಪ್ರಾಯಗಳು ನಮ್ಮ ವೇದಾಂತ ಅಭಿಪ್ರಾಯಗಳಿಗೆ ಹೊಂದಿಕೊಂಡಂತಿವೆ. ವಿಜ್ಞಾನಿಗಳೇ ಹೇಳುವಂತೆ, ಇತ್ತೀಚಿನ ಹೊಸ ಹೊಸ ಸಂಶೋಧನೆಗಳಿಂದ ಭೌತಶಾಸ್ತ್ರವು ಆಧ್ಯಾತ್ಮ ಶಾಸ್ತ್ರಕ್ಕೆ ಹತ್ತಿರ ಬರುತ್ತಿದೆ. "Physics is becoming meta Physics" ಎಂದು ಅಭಿಪ್ರಾಯಪಡುತ್ತಿದ್ದಾರೆ.

ತಮ್ಮ ಜೀವನವನ್ನೆಲ್ಲಾ ವೈಜ್ಞಾನಿಕ ಸಂಶೋಧನೆಗಳಲ್ಲಿ ಕಳೆದು,ಅಪಾರ ಅನುಭವ ಗಳಿಸಿದ ಪ್ರಮುಖ ವಿಜ್ಞಾನಿಗಳು ದೇವರ ಅಸ್ಥಿತ್ವದ ಬಗ್ಗೆ ಏನು ಹೇಳಿದ್ದಾರೆಂಬುದನ್ನು ಗಮನಿಸುವುದೇ ಈ ಲೇಖನದ ಉದ್ದೇಶ. ಪ್ರತಿದಿನವು ನಮ್ಮ ಜೀವನಕ್ಕೆ ಅತ್ಯಾವಶ್ಯಕವಾದ ವಿದ್ಯುಚ್ಛಕ್ತಿಯನ್ನು ಕಂಡುಹಿಡಿದ ವಿಜ್ಞಾನಿ ಮೈಕೇಲ್ ಫ್ಯಾರಡೆ ಈ ರೀತಿ ಹೇಳಿದ್ದಾನೆ.

"These are the glimmerings we have of the second Causes by what the ONE GREAT CAUSE WORKS HIS ideas and governs the earth. The book of nature Which we read is written by the finger of God. Our science, While it shows us these things, shall lead us to think of HIM Who Wrought them." ಈ ವಿಜ್ಞಾನಿಯ ಅಭಿಪ್ರಾಯದಂತೆ ಈ ವಿಶ್ವವೆಲ್ಲವು ಒಂದು ಮಹಾಶಕ್ತಿಯ ಕಲ್ಪನೆಯಂತೆ ಸೃಷ್ಟಿಯಾಗಿ ನಡೆಯುತ್ತಿದೆ. ವಿದ್ಯುಚ್ಛಕ್ತಿಯಂತಹ ಸಣ್ಣ ಶಕ್ತಿಗಳೆಲ್ಲವೂ ಆಮಹಾ ಕಾರಣ ಪುರುಷನ ತುಣುಕುಗಳು ಆ ಸೃಷ್ಟಿಕರ್ತನನ್ನು ಯೋಚಿಸುವಂತೆ ವಿಜ್ಞಾನವು ನಮಗೆ ದಾರಿ ತೋರಿಸಲಿ" ಎಂದಿದ್ದಾನೆ.

ವಿಕಾಸವಾದವನ್ನು ಮಂಡಿಸಿದ ವಿಜ್ಞಾನಿ ಚಾರ್ಲ್ಸ್‌ಡಾರ್ವಿನ್‌ನ ಅನುಭವದಂತೆ the extreme difficulty or rather impossibility of Conceiving this uniue end wonderful universe, including may with his capacity of looking for farwards and far into futurity, as the result of blind Chance or necessity. When these reflecting, I feel impelled to look to a FIST CAUSE having an intelligent mind, in some degree analogous to that of man."

ಸರಿಸಾಟಿಯಿಲ್ಲದ- ಅತ್ಯಾಶ್ಚರ್ಯಕರವಾದ ಈ ವಿಶ್ವ, ಇದರಲ್ಲಿ ಈ ಮಾನವನ, ಅವನ ಬುದ್ಧಿಶಕ್ತಿ ಹಾಗೂ ದೂರಾಲೋಚನ ಶಕ್ತಿ ಇವೆಲ್ಲವನ್ನೂ ಪರಿಶೀಲಿಸಿದಾಗ, ಇವೆಲ್ಲವು ಯಾವ ಕಾರಣವಿಲ್ಲದೆ ಅಕಸ್ಮಾತ್ತಾಗಿ ಸೃಷ್ಟಿಯಾದವುಗಳೆಂದು ನಂಬುವುದು ಕಷ್ಟಸಾಧ್ಯ, ಅಷ್ಟೇಕೆ ನಂಬಲು ಸಾದ್ಯವೇ ಇಲ್ಲ. ಇವೆಲ್ಲಕ್ಕೂ ಮನುಷ್ಯನ ಬುದ್ಧಿಶಕ್ತಿ ಆಲೋಚನಾಶಕ್ತಿಯನ್ನು ಹೋಲುವ ಪ್ರಚಂಡ ಪ್ರಜ್ಞಾಶಕ್ತಿಯಿಂದ ಕೂಡಿದ ಯಾವುದೋ ಒಂದು ಮಹಾ ಕಾರಣಶಕ್ತಿಯ ಬಗ್ಗೆ ಯೋಚಿಸಲೇ ಬೇಕಾಗಿದೆ" ಎಂದಿದ್ದಾದೆ. ಇವನ ಈ ಅಭಿಪ್ರಾಯವು ವೇದಾಂತದ ದೈವ ಕಲ್ಪನೆಗೆ ಹೋಲುತ್ತದೆ.

James Jeans ಎಂಬ ವಿಜ್ಞಾನಿ "That the Physical systems are in the nature of thought than mere machines" ಎಂದಿದ್ದಾನೆ. ಈ ವಿಶ್ವದಲ್ಲಿ ಕಂಡು ಬರುವ ಭೌತ ವಿಶ್ವದ ವ್ಯವಸ್ಥೆಯು ಯಾತ್ರಿಂಕವಾಗಿಲ್ಲದೆ ಯಾವುದೋ ಒಂದು ಯೋಚನಾಶಕ್ತಿಯಿಂದ ರಚಿತವಾದಂತಿವೆ ಎಂಬ ಅಭಿಪ್ರಾಯಪನ್ನು ಸೂಚಿಸಿದ್ದಾನೆ.



Dr. E. Lester Smith ಎಂಬ ವಿಜ್ಞಾನಿಯ ಹೇಳಿಕೆಯಂತೆ" The ordered Complexitry of living things Certainly suggests inteligent design. Indeed, the entire Universe gives eloquent testimony of being a product of mind and intelligence, as some scientists have maintained. ಈ ಭೂಮಿಯ ಮೇಲಿರುವ ಜೀವಿಗಳಲ್ಲಿ ಕಂಡು ಬರುವ ನಿಯಮಬದ್ಧವಾದ ಸಂಕೀರ್ಣತೆಯು ಬುದ್ಧಿವಂತಿಕೆಯ ಉದ್ದೇಶವನ್ನು ಸೂಚಿಸುತ್ತದೆ. ಅಷ್ಟೇಕೆ ಅನೇಕ ವಿಜ್ಞಾನಿಗಳು ಹೇಳುವಂತೆ ಈ ವಿಶ್ವವೇ ಮಹಾ ಬುದ್ಧಿವಂತಿಕೆಯಿಂದ ಸೃಷ್ಟಿಸಲ್ಪಟ್ಟಿದೆ ಎಂಬುದನ್ನು "ಸೂಚಿಸುವ ದ್ಯೋತಕವಾಗಿದೆ" ಎಂದು ತಿಳಿಸಿದ್ದಾನೆ.

According to biologist F a i r field Osborne :- (web of life) "The most basic truth regarding to our earth here is that all living beings in some manner, are related each other. This fact, while valid mainly as a Physical principle, is carries implication of a spiritual nature. ಈ ಪ್ರಪಂಚದ ಪ್ರತಿಯೊಂದೂ ಜೀವಿಯು ಸಹ ಯಾವುದೋ ಒಂದು ವಿಧದಲ್ಲಿ ಒಂದಕ್ಕೊಂದು ಸಂಬಂಧ ಹೊಂದಿವೆ. ಇದು ಭೌತಿಕವಾಗಿ ಅಲ್ಲದೆ ಆಧ್ಯಾತ್ಮಿಕವಾಗಿಯೂ ಸಂಬಂಧ ವಿರುವಂತೆ ತಿಳಿಯುತ್ತದೆ "–ಎಂದಿದ್ದಾನೆ. ಇದು ನಮ್ಮ ಆಧ್ಯಾತ್ಮದಲ್ಲಿ ತಿಳಿಸುವಂತೆ ಸರ್ವ ಪ್ರಾಣಿಗಳಲ್ಲಿಯೂ ಒಬ್ಬನೇ ಪರಮಾತ್ಮನಿದ್ದಾನೆ ಎಂಬುವ ಸತ್ಯಕ್ಕೆ ಸಾಮೀಪ್ಯವಿರುವುದನ್ನು ಕಾಣಬಹುದಾಗಿದೆ.

Dr. Rhine and Dr. Bore of YALE University having conducted a number experiments on animals and studied there behaviour Came to the Conclusion that there is some power which is more suitable than electricity and which is pervading the whole Universe and binding all animals together. Their Conclusion was that the whole Universe is one indivisible whole on account of this one power which is all pervading."

"ಯೇಲ್" ವಿಶ್ವವಿದ್ಯಾನಿಲಯದ ಜೀವಶಾಸ್ತ್ರ ವಿಜ್ಞಾನಿಗಳಾದ ಡಾ|| ರೈನ್ ಮತ್ತು ಡಾ|| ಬೋರ್ ಎಂಬುವರು ಪ್ರಾಣಿಗಳ ಮೇಲೆ ಅನೇಕ ಪ್ರಯೋಗಗಳನ್ನ ಮಾಡಿ, ಅವುಗಳ ವರ್ತನೆಗಳನ್ನು ಪರಿಶೀಲಿಸಿದ ನಂತರ ಕೆಳಕಂಡ ತಿರ್ಮಾನಕ್ಕೆ

ಬಂದಿದ್ದಾರೆ." ವಿದ್ಯುಚ್ಛಕ್ತಿಗಿಂತಲೂ ಅತಿಕುಶಾಗ್ರಮತಿಯಿಂದ ವರ್ತಿಸುವ ಹಾಗೂ ಇಡೀ ವಿಶ್ವವನ್ನು ಅವರಿಸಿರುವ ಒಂದು ಮಹಾ ಶಕ್ತಿ ಈ ಪ್ರಾಣಿಗಳೆಲ್ಲವನ್ನು ಕೂಡಿಸಿದೆ. ಅವರ ತೀರ್ಮಾನ ವೆಂದರೆ ಈ ಒಂದು ಮಹಾಶಕ್ತಿಯು ಇಡೀ ವಿಶ್ವದಲ್ಲೆಲ್ಲಾ ಆವರಿಸಿರುವುದರಿಂದ ಇಡೀ ವಿಶ್ವವೇ ಅಭೇದ್ಯವಾಗಿ ಒಂದಾಗಿದೆ, ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆವರ ಈ ಹೇಳಿಕೆಯು ವೇದಾಂತದಲ್ಲಿ ಬರುವ ||ಸರ್ವಂ ಖಲು ಇದಂ ಬ್ರಹ್ಮ" All the living beings and objects we see arround us are only prrahman"-ಎಂಬ ಅಭಿಪ್ರಾಯಕ್ಕೆ ಹೊಂದಿಕೊಂಡಿರುವುದನ್ನು ಗಮನಿಸಬಹುದಾಗಿದೆ. ವಿಜ್ಞಾನಿಗಳು ದೇವರ ಬಗ್ಗೆ ಅವನ ಇರುವಿಕೆಯ ಬಗ್ಗೆ ತಿಳಿಸಿರುವ ಇಂತಹ ಅನೇಕ ಅಭಿಪ್ರಾಯಗಳನ್ನು ಪರಿಶೀಲಿಸಿದ ನಂತರ ಡಾ|| ಬ್ರಹ್ಮಾನಂದ ಕುರ್ಪಿ ಮತ್ತು ಡಾ|| ಗಂಗೂಲಿ ಮುಂತಾದ ವಿಜ್ಞಾನಿಗಳು ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಾ ಈ ರೀತಿ ಬರೆದಿದ್ದಾರೆ.

"In recent years, Scientists in increasing numbers are comming round to the view which Einstein gave to new physics "that behind the "FIELD and its physical existence stands the mysterious "non-material reality;" Which is now being Called by them Variously as "MIND" "MIND-STUFF" "SUBSTRATUM," Consciousness" "Cosmic-Consciousnes and so on.

ಅದರಿಂ ಭೌತಶಾಸ್ತ್ರ ವಿಜ್ಞಾನಿ ಐನ್‌ಸ್ಟೀನ್ ಹೇಳಿದಂತೆ ಈ ಭೌತ ವಿಶ್ವದ ಹಿಂದೆ ರಹಸ್ಯವಾದ ಗೂಢವಾದ ಪ್ರಾಪಂಚಿಕ ವಲ್ಲದ ವಾಸ್ತವಿಕತೆ ಇದೆ (Non-material Reality ಎಂದು ಹೇಳಿರುವುದನ್ನೇ ಈಗಿನ ವಿಜ್ಞಾನಿಗಳು ಒಪ್ಪುತ್ತಾ ಅದನ್ನೇ ಮೇಲೆ ತಿಳಿಸಿದಂತೆ ಅನೇಕ ಹೆಸರುಗಳಿಂದ ಕರೆಯುತ್ತಿದ್ದಾರೆ.

ಈ ಎಲ್ಲಾ ವಿಜ್ಞಾನಿಗಳ ಅಭಿಪ್ರಾಯದಂತೆ ಈ ವಿಶ್ವ ಜಡವಲ್ಲ. ಇದನ್ನು ಯಾವುದೋ ಒಂದು ಮಹಾ ಶಕ್ತಿ ಸೃಷ್ಟಿಸಿ ನಿಯಮ ಬದ್ಧವಾಗಿ ನಡೆಸಿಕೊಂಡು ಹೋಗುತ್ತಿದೆ. ಅದು ಇಡೀ ವಿಶ್ವವನ್ನೇ ವ್ಯಾಪಿಸಿದೆ. ಇದನ್ನು ಅವರು Mind ಎಂದು Mind-stuff ಎಂದು ಹಾಗೂ ಇತರೆ ಹೆಸರುಗಳಿಂದ ಕರೆದಿದ್ದಾರೆ ಮಹಾ ಶಕ್ತಿ ಇದೆ ಎಂಬ ಕಲ್ಪನೆ ವಿಜ್ಞಾನಿಗಳಲ್ಲಿ ಮೂಡಿದೆ. ಇದನ್ನೇ ನಮ್ಮ ಋಷಿಗಳು ಸಾಧುಸಂತರು, ಯೋಗಿಗಳು ಭಗವಂತನೆದೂ ಸರ್ವಜ್ಞ, ಸರ್ವಶಕ್ತಿ ಸರ್ವವ್ಯಾಪಿ ದೇವರೆಂದು ಕರೆದಿದ್ದಾರೆ ಅಲ್ಲವೆ.

ಹೆಚ್.ಎಸ್. ನರಸಿಂಹ ಜೀಯರ್, ತುಮಕೂರು
ಸಿದ್ಧಗಂಗಾ



# ಇರುವುದೊಂದೇ ಭೂಮಿ, ಇದನ್ನು ಉಳಿಸೋಣ.

"ಆಕಾಶ ವಾಯುವನ್ನು ಹಿಡಿದಿಡುತ್ತದೆ; ವಾಯು ಜಲವನ್ನು ಹಿಡಿದಿಟ್ಟದೆ; ಜಲವನ್ನಾಧರಿಸಿದೆ–ಈ ಭೂಮಿ, ಈ ಜಲ ಈ ಭೂಮಿ ಎಲ್ಲ ಜೀವಜಂತುಗಳನ್ನೂ ಕಾಪಾಡುತ್ತಿದೆ" ಇದು 'ಸಂಚಯಗಾಥ ಸೂತ್ರ' ವೆಂಬ ಬೌದ್ಧಗ್ರಂಥದ ಒಂದು ಸೂಕ್ತಿ. ಇಡೀ ಬ್ರಹ್ಮಾಂಡ ಒಂದನ್ನೊಂದು ಹೇಗೆ ಆಧರಿಸಿದೆ ಎಂಬ ಅರಿವು ನಮಗಿಂತ ನಮ್ಮ ಪೂರ್ವಜರಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದಲೇ ವಾಯು, ಆಕಾಶ, ಭೂಮಿ–ಎಲ್ಲವೂ ದೈವ ಸಮಾನವಾಗಿತ್ತು, ಇವನ್ನು ಪೂಜಿಸುತ್ತಿದ್ದರು. ಸಾವಿರಾರು ವರ್ಷಗಳವರೆಗೆ ನದಿ, ಪರ್ವತ, ವೃಕ್ಷಗಳಿಗೆ ಪೂಜೆ ಸಲ್ಲಿಸುತ್ತಾ ಬಂದರು. ಇವುಗಳಿಂದ ಮಾನವ ಎಷ್ಟುಬೇಕೋ ಅಷ್ಟನ್ನೆ ತೆಗೆದುಕೊಂಡ. ತಾನೂ ಬದುಕಿದ, ಪ್ರಕೃತಿಯನ್ನೂ ಬದುಕಲು ಬಿಟ್ಟ.

ಆದರೆ ಇನ್ನೂರು ಅಥವಾ ಇನ್ನೂರೈವತ್ತು ವರ್ಷಗಳ ಹಿಂದೆ ಕೈಗಾರಿಕೀಕರಣದ ಉದಯವಾದ ಮೇಲೆ ಪ್ರಕೃತಿ ಮಾತೆಯನ್ನು ಪೂಜಿಸುವುದರ ಬದಲು ಇದರ ಶೋಷಣೆ ಪ್ರಾರಂಭವಾಯಿತು. ವಿಜ್ಞಾನವು ಮನುಷ್ಯನ ಕೈಗೆ ಎಂಥ ಯಂತ್ರಗಳ ಕೊಟ್ಟಿತೆಂದರೆ ಇದು ಪ್ರಕೃತಿಯ ಅಸ್ತಿತ್ವಕ್ಕೇ ಕೊಡಲಿ ಪೆಟ್ಟು ಹಾಕತೊಡಗಿತ್ತು. ಯಾವ ಪ್ರಕೃತಿಯನ್ನು ನಾವು ಪೂಜಿಸುತ್ತಿದ್ದೆವೋ ಅದನ್ನೆ ನಾವು ನಮ್ಮ ಸ್ವಾರ್ಥಕ್ಕೆ ಮಿತಿಮೀರಿ ಬಳಸಿಕೊಳ್ಳ ತೊಡಗಿದವು. ವಾಯು ನಮಗೆ ಗಾಳಿ ಬೀಸುವ ಬೀಸಣಿಗೆಯಾಯಿತು, ನೀರು ವಿದ್ಯುತ್ ಉತ್ಪಾದಿಸಲು ಸಾಧನವಾಯಿತು, ಮರಗಳು ಕುರ್ಚಿ, ಬಾಗಿಲುಗಳ ಕಾವು, ಆರಾಮ ನೀಡುವ, ಪ್ರತಿಷ್ಠೆ ಕೊಡುವ ಪೀಠೋಪಕರಣಗಳಾದವು. ನದಿಗಳು ಮಾನವನ ಕೊಳೆ ತೊಳೆಯುವ ಚರಂಡಿಗಳಾದವು, ಬೆಟ್ಟಗಳು ಸಂಚಾರ ತಾಣಗಳಾದವು. ನಾವೆಲ್ಲಾ ಭಸ್ಮಾಸುರರಾದೆವು.

ಇವುಗಳ ಪರಿಣಾಮ–ಇಂದು ಎಲ್ಲೆಡೆಯೂ ತ್ರಾಹಿ, ತ್ರಾಹಿ ಎಂಬ ಕೂಗು. ಹೊಗೆ ಹೆಚ್ಚಾಗುತ್ತಿದೆ. ಗಲಾಟೆ ಹೆಚ್ಚುತ್ತಿದೆ, ವಿಷಪೂರ್ಣ ನೀರು, ವಿಷಪೂರ್ಣ ವಾಯು, ವಿಷಮಯ ಭೂಮಿ (ಮಣ್ಣು) ಇವು ಅನೇಕ ಸಮಸ್ಯೆಗಳನ್ನು ಉಂಟು ಮಾಡುತ್ತಿವೆ. ಎಷ್ಟುದೂರ ನೋಡಿದರು ಕಣ್ಣಿಗೆ ಹಸಿರು ಗಿಡ ಮರಗಳ ಸುಳಿವೇ ಇಲ್ಲವಾಗಿದೆ. ರಸ್ತೆಗಳ ಮೇಲೆ ನಾಗಾಲೋಟದಲ್ಲಿ ಓಡುತ್ತಿರುವ ವಾಹನಗಳು ದಾನವನಂತೆ ಮಾನವನ ಅಸ್ತಿತ್ವವನ್ನೆ ಅಲುಗಾಡಿಸುತ್ತಾ ಸಾಗಿವೆ. ದುರಾದೃಷ್ಟಕರವೆಂದರೆ

ಈ ಹುಚ್ಚು ಕುದುರೆಯ ಓಟದಲ್ಲಿ ಯಾರಿಗೂ ಕೊಂಚ ಹೊತ್ತು ನಿಂತು ನಾವೆತ್ತ ಸಾಗಿದ್ದೇವೆಂದು ಯೋಚಿಸಲು ಪುರಸೊತ್ತೇ ಇಲ್ಲದಿರುವುದು. ಎಲ್ಲರೂ ಯೋಚಿಸುವು-ದೇನೆಂದರೆ–ತಾನು ನಿಂತರೆ ಉಳಿದವರು ನನ್ನನ್ನು ಹಿಂದೆಹಾಕಿ ಮುಂದೆ ಹೋಗು-ವರು–ಎಂದು.

ಎಲ್ಲಿಗೆ ಹೋಗಿಬಿಡುವರು ? ಏನು ಸಿಗುವುದು ? ಯಾರ ಬಳಿ ರಾಜ್ಯ ಕೋಶ ಸಿರಿ-ಸಂಪತ್ತು ಎಲ್ಲವೂ ಇತ್ತೋ ಅವರೆಲ್ಲಾ ಎತ್ತ ಹೋದರು ? ಏನು ಕೊಂಡೊ-ಯ್ದರು ? ಪ್ರಾಪಂಚಿಕ ಸಿರಿಸಂಪದದ ಹುಚ್ಚು ಓಟದಲ್ಲಿ ಇಡೀ ಜಗತ್ತು ಕುರುಡಾ-ದಂತಿದೆ. ಇದರ ಅಂತ್ಯ ಹೇಗಾಗುತ್ತದೋ ಯಾರಿಗೂ ಗೊತ್ತಿಲ್ಲ. ಎಲ್ಲ ಸುಖ-ಸಂಪತ್ತು ಗಳಿದ್ದಾಗ್ಯೂ ಯಾರು ಸುಖಿಯಾಗಿರುವಂತೆ ಕಾಣುವುದಿಲ್ಲ. ಹಾಗಾದರೆ ಈ ಭೂಮಿ, ವನಸಂಪತ್ತು, ಹಸಿರು ಬಂಗಾರ, ಪವಿತ್ರನದಿಗಳನ್ನು ಏಕೆ ಹಾಳುಗೆಡವುತ್ತಿದ್ದೇವೆ? ಮುಂದಿನ ಪೀಳಿಗೆ ನಮ್ಮನ್ನು ಕ್ಷಮಿಸೀತೆ? ಇದಕ್ಕೆ ಅರ್ಹತೆ ನಮಗಿದೆಯೆ ?

ಉಷ್ಣಾಂಶ ಎಲ್ಲೆಡೆಯೂ ಹೆಚ್ಚುತ್ತಿದೆ. ವಿಕಾಸದ ಹೆಸರಿನಲ್ಲಿ ಓಜೋನ್ ವಲಯ ಹಾಳಾಗುತ್ತಿದೆ. ನಮ್ಮ ರಕ್ಷಾಕವಚ ಹರಿಯುತ್ತಿದೆ. ಸೂರ್ಯನ ತೀಕ್ಷ್ಣ ಕಿರಣಗಳು ಬೆಂಕಿಯುಂಡೆಗಳಾಗಲಿವೆ ಧ್ರುವಗಳು ಮಂಜುಗಡ್ಡೆ ಕರಗಿ ಗಗನ ಚುಂಬಿ ಕಟ್ಟಡಗಳೂ ಮುಳುಗಿ ಹೋಗುವ ದಿನಗಳು ದೂರವಿಲ್ಲ. ಜಲಪ್ರಳಯದ ದಿನಗಳು ನಿಜವಾಗಬಹುದು. ದೊಡ್ಡ ದೊಡ್ಡ ಅಣೆಕಟ್ಟೆಗಳೆಲ್ಲಾ ಕೊಚ್ಚಿ ಹೋಗು-ವುವು. ಎಲ್ಲವೂ ಗಂಗೆಯಲ್ಲಿ ಲೀನವಾಗುವುದು. ಜಲಸಮಾಧಿಯ ಮುನ್ನ ನಾವು ಎಚ್ಚೆತ್ತುಕೊಳ್ಳಬೇಕು.

ಇನ್ನೂ ಸಮಯವಿದೆ. ಭೂಮಿಯನ್ನು ಉಳಿಸೋಣ. ನಾವಿರುವುದು ಇದೊಂದೇ ಭೂಮಿ–ಎಂಬ ಕವಿವಾಣಿಯನ್ನು ಸ್ಮರಿಸೋಣ. ನದಿ, ಪರ್ವತ, ವೃಕ್ಷಗಳು, ಭೂಮಿ ಎಲ್ಲ ಪಂಚಭೂತಗಳನ್ನು ಉಳಿಸಿಕೊಳ್ಳೋಣ. ಮನುಕುಲ ಉಳಿಯಲಿ ಮುಂದಿನ ಪೀಳಿಗೆ ಉಳಿಯಲಿ, ಬೆಳೆಯಲಿ, ಬದುಕಲಿ, ಬಾಳಲಿ.

ಜಿ. ಆರ್. ರಂಗಸ್ವಾಮಯ್ಯ (ಐ. ಸಿ. ಎ. ಆರ್.), ನವದೆಹಲಿ.





# ಯುವ ಜನತೆ ಮತ್ತು ಪ್ರಗತಿ

ಜಗತ್ತು ತನ್ನ ಚಲನಶೀಲ ಗುಣದಿಂದ ನವ ನವೀನ ಅರ್ಥವನ್ನು ಕಂಡು-ಕೊಳ್ಳುತ್ತದೆ. ಸದಾ ನಡೆಯುತ್ತಿರುವುದೇ ಜಗತ್ತು; ನಿನ್ನೆ ಇದ್ದ ಹಾಗೆ ಇಂದಿಲ್ಲ ಇಂದಿನ ಹಾಗೆ ನಾಳೆ ಇರುವುದಿಲ್ಲ, ಇದು ಬದಲಾವಣೆಯ ಒಳಮರ್ಮ.

ಬದಲಾವಣೆ ಇಲ್ಲದ ಜಗತ್ತಿಲ್ಲ; ಜಗತ್ತಿಲ್ಲದ ಚಲನೆಯೂ ಇಲ್ಲ. ನಡೆಯಿಂದ ಮಾನವನ ಬದುಕಿನ ಪಯಣ; ಸನ್ನಡೆ ಇದ್ದರೆ ಹಿನ್ನಡೆ ಇರದು. ನಮ್ಮ ಮುನ್ನಡೆಗೆ ನಾವೇ ಸದಾ ಕಾರಣಕರ್ತರು. ಎಲ್ಲಿ ಯೋಜನೆ ಅಲ್ಲಿ ಬಾಳಿನ ಚಲನಶೀಲ ನವ್ಯ ನಿ ಶಾನೆ.

ಪ್ರತಿಯೊಬ್ಬರ ಬದುಕಿನಲ್ಲೂ ಯೋಜನೆಗಳು ಅತ್ಯಗತ್ಯ. ಸರಿಯಾದ ಯೋಚ ನೆಗಳಿದ್ದರೆ ಸರಿಯಾದ ಯೋಜನೆಗಳೂ ಮೂಡಿಯಾವು. ಜೀವನ ಯೋಜನೆಯನ್ನು ನಾವು ಸರಿಯಾಗಿರಿಸಿ ಕೊಂಡರೆ ನಮ್ಮ ಬದುಕು ಹಸನಾಗುವುದಷ್ಟೇ ಅಲ್ಲ ರಾಷ್ಟ್ರ ನಿರ್ಮಾಣ ಕಾರ್ಯವೂ ಪರೋಕ್ಷವಾಗಿ ಸಾಧಿತವಾಗುತ್ತದೆ. ಎಲ್ಲ ವ್ಯಕ್ತಿಗಳಿಗೂ ಎಲ್ಲ ಕ್ಷೇತ್ರಗಳಿಗೂ ಯೋಜನೆಯ ಕಾಯಕಲ್ಪ ಅನಿವಾರ್ಯ.

ಇಂದಿನ ಯುವಜನತೆ ವಿಕಲ್ಪಗಳತ್ತ ಹೆಚ್ಚು ಹೆಚ್ಚು ಹೊರಳುತ್ತಿರುವುದು ದುರ್ದೈವ; ನಮ್ಮ ಭಾರತೀಯ ಯುವಕರು ಮನಸ್ಸು ಮಾಡಿದರೆ ತಮ್ಮ ಬಾಳುವೆ ಯನ್ನೂ ಸುಂದರ ಗೊಳಿಸಿಕೊಳ್ಳಬಹುದು; ತನ್ಮೂಲಕ ದೇಶವನ್ನೂ ಅಭಿವೃದ್ಧಿಯತ್ತ ಕೊಂಡೊಯ್ಯಬಹುದು. ಯುವತಿಯರ ಹೆಜ್ಜೆಗಳು ಪ್ರಗತಿ ಪಥದಲ್ಲೇ ಇರುವುದು ಇಂದು ಎಲ್ಲೆಡೆ ಎದ್ದು ಕಾಣುತ್ತಿರುವ ಅಂಶ; ಆದರೆ ನಮ್ಮ ಯುವಕರು ನೈತ್ಯಾತ್ಮಕ ಕಾರ್ಯ ಚಟುವಟಿಕೆಗಳಲ್ಲೇ ಮುಳುಗಿರುವುದರಿಂದ ಆತ್ಮ ವಿಮರ್ಶೆ ಈಗ ಅನಿವಾರ್ಯ

ಯುವ ಜನತೆ ಇಂದು ಗೊಂದಲಗಳಲ್ಲಿ ಸಿಲುಕಿಕೊಂಡ ಹಾಗೆ ಕಾಣುತ್ತದೆ. ಆದ್ದರಿಂದಲೇ ಅಪೂರ್ಣತೆ, ಯುವಕರು ತಮ್ಮ ಬದುಕಿನ ಬಗ್ಗೆ ಗಂಭೀರವಾಗಿ ಚಿಂತಿಸಬೇಕಾಗಿದೆ. ಯಾವ ಯಾವ ಕೆಲಸಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಡ ಬೇಕೆಂಬುದನ್ನು ಅವರೀಗ ಚಿಂತಿಸಬೇಕಾಗಿದೆ.

ನಾನು ಕಂಡ ಹಾಗೆ ನಗರಗಳಲ್ಲಿನ ವಿದ್ಯಾವಂತ ಯುವಜನತೆ ಇಂದು ಮನೆ-ಯವರಿಗೆ ಭಾರವಾಗಿ ಬದುಕುತ್ತಾ ತುಂಬಾ ಹಗುರವಾದ ಪ್ರವೃತ್ತಿಗಳಲ್ಲಿ ಪರ್ಯ ವಸಾನವಾಗುತ್ತಾ ಮನರಂಜನೆಯೇ ತಮ್ಮ ಸಕಲ ಸರ್ವಸ್ವವೇನೋ ಎಂದು ಭಾವಿಸಿ

ಕ್ಷುಲ್ಲಕದಲ್ಲಿ ಲೀನವಾಗುತ್ತಿರುವುದು ಸರ್ವಥಾ ಸಾಧುವಲ್ಲ. ಇದನ್ನು ಪ್ರತಿಯೊಬ್ಬ ಯುವಕನೂ ಈಗ ಮುಖ್ಯವಾಗಿ ಯೋಚಿಸಿ ಕ್ರಿಯಾತ್ಮಕವಾಗಿ ಕಾರ್ಯೋನ್ಮುಖನಾಗಬೇಕು.

ಒಬ್ಬ ಯುವಕ ಮನಸ್ಸು ಮಾಡಿದರೆ ತಮ್ಮ ಮನೆಯ ಅಂಗಳ ಅಚ್ಚು ಕಟ್ಟು ಮಾಡಬಹುದು; ನಗರ ಕೊಳಚೆಗಳ ಆಗರ ಆಗಿರುವ ಕಲುಷಿತ ಪರಿಸರದ ಸನ್ನಿವೇಶದಲ್ಲಿ ಇದೊಂದು ಉಪಯುಕ್ತ ಉದಾಹರಣೆ ಅಷ್ಟೆ. ಇಂಥವು ಸಾವಿರವಿವೆ, ತೊಡಗಿಸಿಕೊಂಡರೆ ಇನ್ನಷ್ಟು ಕಂಡಾವು.

ರಸ್ತೆ ದುರಸ್ತಿ ಮಾಡುವಂಥ ದೊಡ್ಡ ಕೆಲಸಕ್ಕೆ ಕೈ ಹಾಕುವ ಮೊದಲು ತಮ್ಮ ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳುವುದು, ತಮ್ಮ ಅಮೂಲ್ಯ ಸಮಯವನ್ನು ಹಾಳುಮಾಡದೆ ಸೃಜನಶೀಲವಾಗುವುದು ಆಗಬೇಕಾದ ಕೆಲಸ.

ದುಡಿಮೆ ಅತ್ಯಂತ ಮುಖ್ಯ. ದುಡಿವ ಮನಸ್ಸಿದ್ದರೆ ಜಗತ್ತು ವಿಶಾಲವಾಗಿದೆ; ಬಡಗಿ ಆಗಬಹುದು; ಬಡವ ಆಗದೆ ಇರಬಹುದು; ಲೋಫರ್ ಅನ್ನಿಸಿಕೊಳ್ಳುವ ಬದಲು ಪೇಪರ್ ಹಾಕಬಹುದು; ಡ್ರ್ಯಾಪರ್ ಅಗುವ ಬದಲು ಡ್ರೈವರ್ ಆದರೂ ಆಗಬಹುದು; ಬೀದಿ ಕಾಮಣ್ಣ ಆಗುವ ಬದಲು ಕಾರ್ಮಿಕ ಭೀಮಣ್ಣ ಅನ್ನಿಸಿಕೊಳ್ಳಬಹುದು. ಪ್ರವೃತ್ತಿ ಸರಿಇದ್ದರೆ ಅದರಲ್ಲೇ ವೃತ್ತಿಯನ್ನು ಕಂಡುಕೊಳ್ಳಬಹುದು.

ಆಳಿನಂತೆ ನಾವು ದುಡಿದರೆ ತಾನೆ ಬಂದ ವರಮಾನದಿಂದ ದೊರೆಯಂತೆ ಬದುಕನ್ನು ಅನುಭವಿಸುವುದು? ಸೋಮಾರಿತನ ಅಂಟಿಕೊಂಡರೆ ಯಾವತ್ತು ನಮ್ಮ ಬದುಕು ಬಂಜರಾಗುತ್ತದೆ. ಪ್ರಗತಿ ಎಲ್ಲೂ ಇಲ್ಲ, ಅದು ನಮ್ಮ ಬಾಳಿನ ಗತಿಯಲ್ಲಿದೆ; ಮಾನವನ ಮತಿಯಲ್ಲಿದೆ! ಯೂರಿಪಿಡಿಸ್ ಒಂದು ಕಡೆ ಬಹಳ ಸುಂದರವಾಗಿ ಹೇಳಿದ್ದಾನೆ. "ದುಡಿಮೆಯೇ ಯಶಸ್ಸಿನ ಅಪ್ಪ" ಎಂದು; ಇದು ತಲೆಯಮೇಲೆ ಕೈ ಹೊತ್ತು ಕೂಡುವ ನಮ್ಮ ಯುವಜನಕ್ಕೆ ಅರ್ಥ ಆಗಬೇಕು.

ದುಡಿಮೆಗಾರನಿಗೆ ಮರಣದ ಕ್ಷಣ ವಿಶ್ರಾಂತಿಯಂತೆ; ಸೋಮಾರಿಗೆ ಕ್ಷಣ ಕ್ಷಣವೂ ಮರಣದ ಯಾತನೆ ತಾನೆ? ದುಡಿಯುವುದಕ್ಕೆ ಸಿದ್ಧ ಆದರೆ ನೂರು ದಾರಿ ಕಂಡಾವು, ಕೂಲಿ ಮಾಡಬಹುದು, ಅಂಗಡಿ ಇಡಬಹುದು; ಕ್ಲೀನರ್ ಆಗಬಹುದು ಟಿಕೇಟ್ ಮಾರಬಹುದು ........ ಇವೆಲ್ಲಾ ನಮ್ಮ ಘನತೆಗೆ ಕುಂದು ಎಂದು ಇಂದಿನ ಯುವಜನ ಭಾವಿಸಿರುವುದರಿಂದಲೇ ಪ್ರತಿಷ್ಠೆಯ ಪ್ರಶ್ನೆ ಎಲ್ಲರ ಮುಂದೆಯೂ ಬೃಹದಾಕಾರವಾಗಿರುವುದರಿಂದಲೇ ಎಲ್ಲರೂ "ವೈಟ್ ಕಾಲರ್ ಜಾಬ್" ಬೇಕೆಂಬ ಹಂಬಲದಲ್ಲಿ ನಿರುದ್ಯೋಗಿಗಳಾಗಿ ಹತಾಶರಾಗಿ ಭ್ರಮೆಗಳಲ್ಲಿ ಬವಣೆಗಳಲ್ಲಿ ಹೊರಳುತ್ತಿರುವುದು.



ಗಿಡ ನೆಡುವುದು, ಸೊಪ್ಪು ಮಾರುವುದು, ಕಾರ್ ಓಡಿಸುವುದು, ಕಾಫಿ ಕಪ್ಪು ತೊಳೆಯುವುದು, ಚಪ್ಪಲಿ ಹೊಲಿಯುವುದು, ಬಟ್ಟೆ ಇಸ್ತ್ರಿ ಮಾಡುವುದು ನಮ್ಮ ನಮ್ಮ ಅಂತಸ್ತಿಗೆ ಕಡಿಮೆ ಎಂದು ಈ ನಾಡಿನ ಸಾವಿರ ಸಾವಿರ ಯುವಜನ ಭಾವಿಸಿರುವುದರಿಂದ ಪ್ರಗತಿ ಕುಂಠಿತವಾಗಿದೆ. ಓದಿದ ತರುಣರೂ ದೈಹಿಕ ಶ್ರಮ ಶ್ರೇಷ್ಠ ಎಂದು ತಿಳಿದುಕೊಂಡು ಕಾರ್ಯೋನ್ಮುಖರಾದರೆ ಎಲ್ಲರಿಗೂ ಒಂದಲ್ಲ ಒಂದು ಕೆಲಸ ಕಣ್ಣಿಗೆ ಕಂಡೇ ಕಾಣುತ್ತದೆ. ಆಗ ನಮ್ಮೊಳಗೇ ಇರುವ ನಮ್ಮ ಬಹು ದೊಡ್ಡ ಶತ್ರುವಾದ ಸೋಮಾರಿತನ ಓಡಿಹೋಗಿ ನಮ್ಮ ನಮ್ಮ ಶರೀರವೇ ತೋಟವಾಗಿ ಮನಸ್ಸೇ ತೋಟಗಾರನಾಗಿ ಚಟುವಟಿಕೆ ರಸಗೊಬ್ಬರವಾಗಿ ಕಾರ್ಯಗಳೇ ಫಲ ಬಿಡುವ ವೃಕ್ಷಗಳಾಗುತ್ತವೆ. ಪ್ರಗತಿ ಬೀಜ ನಮ್ಮಲ್ಲೇ ಇದೆ.

(ಸೌಜನ್ಯ : ಬಿತ್ತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಕಮಲಾಪುರ-೫೮೩ ೨೧೧

---

**ಶ್ರೀ ದೊಡ್ಡರಂಗೇಗೌಡ,** 'ಕಾವ್ಯಶ್ರಿ' ದತ್ತಾತ್ರೇಯ ಆಶ್ರಮದ ಹತ್ತಿರ ವಿಶ್ವೇಶ್ವರಯ್ಯ ಬಡಾವಣೆ, ಹೊಸಕೋಟೆ-೫೬೨೧೧೪, ಬೆಂಗಳೂರು ಜಿಲ್ಲೆ

## ದಾರಿಗೆ ಬೆಳಕು!

ದೂರದೂರಿಗೆ ಸಾಗುತಿಹ ಪಯಣಿಗಾ!
ಏಕಿಂತು ಸುಯ್ ಗುಡುತ ಕೂತಿರುವೆ?
ಸೂರ್ಯ ಮುಳುಗಿದನೆಂದೋ ದಾರಿ ಕಾಣದು, ಎಂದೋ
ಇಂತು ಕೈ ಚೆಲ್ಲಿ ಕೂತರೆದಾರಿ ಕಾಂಬುವುದೇನು ?
ಏಳು ! ಮೇಲೇಳು ! ಕೈಲಿರುವ ಕಂದೀಲ ಹೊತ್ತಿಸು !
ಆಗ ಕಂಡೀತು ನಿನಗೆ ನಿನ್ನ ಮುಂದಿನ ದಾರಿ !
ಎಲ್ಲಕೂ ದೈವವೇಗತಿ ಎಂಬೆಯಾದರೆ ನೀನು!
ಅರಿವುಳ್ಳ ನರನಾಗಿ ನೀಹುಟ್ಟಿದರ ಫಲವೇನು !
ತನ್ನರಿವ ಬಳಸುವಗೇ ದೈವವೂ ಒಲಿವುದಂತೆ !
ಏಳು ಪಯಣಿಗಾ, ಎದ್ದೇಳು

ಹೈದರಾಬಾದ್ **ಶಾರದಾ ಜಡೆ :**

# "ವಿಶ್ವ ಶಾಂತಿ ಮಂಡಲಿ"
## ["UNIVERSAL PEACE MISSION"]

ಗಂಡು–ಹೆಣ್ಣು, ಎಂಬ ಎರಡು ಜಾತಿಗಳು ದೈವ ಸೃಷ್ಟಿ. ಉಳಿದೆಲ್ಲ ಜಾತಿಗಳು ಮಾನವರು ಹಾಕಿಕೊಂಡ ಬೇಲಿ. ದೇವರ ಸೃಷ್ಟಿಯಲ್ಲಿನ ಜಾತಿಗಳು ಒಬ್ಬರನ್ನೊಬ್ಬರು ಪ್ರೀತಿಸುತ್ತಾರೆ, ಗೌರವಿಸುತ್ತಾರೆ. ಅಂತೆಯೇ ಮಾನವರು ನಿರ್ಮಿಸಿಕೊಂಡ ಜಾತಿಗಳಲ್ಲಿಯೂ ಪರಸ್ಪರ ಪ್ರೀತಿ, ಗೌರವಗಳು ಬೆಳೆಯಬೇಕು. ಜಾತಿಗಳ ಮಧ್ಯೆ ವೈಮನಸ್ಯ ಬೆಳೆದು ಧರ್ಮಕ್ಕೆ ಚ್ಯುತಿ ಬರುವಂತಾದಾಗ, ಜನತೆಗೆ ಮಾರ್ಗದರ್ಶನ ನೀಡಲು ಯಾರಾದರೊಬ್ಬ ಪುಣ್ಯಾತ್ಮರು ಅಥವಾ ಯಾವುದಾದರೊಂದು ಶಕ್ತಿ ಹುಟ್ಟಿಕೊಳ್ಳುತ್ತದೆ. ಯೇಸುಕ್ರಿಸ್ತ, ಮಹಮದ್ ಪೈಗಂಬರ್, ಬುದ್ಧ, ಬಸವಣ್ಣ, ಮಹಾವೀರ, ಕಬೀರ, ಶಂಕರಾಚಾರ್ಯ, ಸಂತ ಶಿಶುನಾಳ ಶರೀಫ್, ಸತ್ಯಸಾಯಿ ಬಾಬ, ಗುರುನಾನಕ್, ಅಂಬೇಡ್ಕರ್, ಮಹಾತ್ಮಗಾಂಧಿ........ ಮುಂತಾದ ಅನೇಕ ದಾರ್ಶನಿಕರು, **'ದೇವನೊಬ್ಬ ನಾಮ ಹಲವು'** ಎಂದು ಬೋಧಿಸಿದ್ದಾರೆ. ಒಬ್ಬೊಬ್ಬರು ಒಂದೊಂದು ಹೆಸರಿನಲ್ಲಿ ಕರೆಯುವ ದೇವರು, **'ಅಗೋಚರ ಶಕ್ತಿ'** ಅದು ಎಲ್ಲ ಮಾನವರನ್ನೂ ಕಾಪಾಡುವ **'ಏಕೈಕ ಶಕ್ತಿ'**

ಸೂರ್ಯ, ಚಂದ್ರ, ನಕ್ಷತ್ರ, ಆಕಾಶ, ಭೂಮಿ, ಗಾಳಿ, ನೀರು....ಮುಂತಾದವುಗಳನ್ನು ಒಬ್ಬೊಬ್ಬರು ಒಂದೊಂದು ಹೆಸರಿನಲ್ಲಿ ಕರೆದರೂ ಸಹ, ಅವುಗಳ ಗುಣ ಹಾಗೂ ಉಪಯುಕ್ತತೆ ಎಲ್ಲ ಮಾನವರಿಗೂ ಒಂದೇ ರೀತಿಯಾಗಿರುತ್ತದೆ. ಹಾಗೆಯೇ ದೇವರನ್ನು ಯಾವ ಹೆಸರಿನಲ್ಲಿ ಕರೆದರೂ, ಅವರ ಕೃಪೆ ಮಾತ್ರ ಒಂದೇ ರೀತಿಯಾಗಿದೆ. ಕೋಮು ಸೌಹಾರ್ಧ ಹಾಗೂ ಪರಧರ್ಮ ಸಹಿಷ್ಣುತೆಯ ಬಗ್ಗೆ ಎಲ್ಲ ಸಂತರೂ ತಮ್ಮ ದಿವ್ಯ ಸಂದೇಶದಲ್ಲಿ ಒತ್ತಿ ಹೇಳಿದ್ದಾರೆ.

ಬೇರೆ ಧರ್ಮದವರನ್ನು ದೂಷಿಸುವಂತೆ ಅಥವಾ ದ್ವೇಷಿಸುವಂತೆ ಯಾವ ಧರ್ಮದಲ್ಲೂ ಹೇಳಿರಲಿಕ್ಕಿಲ್ಲ. ಎಲ್ಲ ಜಾತಿಯಲ್ಲೂ ಸ್ತ್ರೀ–ಪುರುಷರ ಲಕ್ಷಣಗಳು, ರಕ್ತದ ಬಣ್ಣ, ಆಸೆ, ದಾಹ, ಹಸಿವು, ನಿದ್ರೆ, ಕಾಯಿಲೆ, ಹುಟ್ಟು, ಸಾವು........ ಮುಂತಾದವುಗಳೆಲ್ಲಾ ಒಂದೇ. ವೃತ್ತಿಯ ಮೇಲೋ ಅಥವಾ ವಾಸಿಸುವ ಪರಿಸರದ ಪರಿಣಾಮವಾಗಿಯೋ ಜಾತಿಯನ್ನು ಸೃಷ್ಟಿಸಿಕೊಂಡಿರಬಹುದು. ನಾಲ್ಕು ಗೋಡೆಗಳ ಮಧ್ಯೆ ಇರಬೇಕಾದ ಜಾತಿ, ಇಂದು ರಸ್ತೆಗಿಳಿಯುತ್ತಿರುವುದೊಂದು ವಿಪರ್ಯಾಸ. ಇದರಿಂದ ಕೋಮು ಗಲಭೆ ವಿಷ ವೃಕ್ಷದಂತೆ ಬೆಳೆಯುತ್ತದೆ. ಪಿಡುಗು ರೋಗದಂತೆ ಹರಡುತ್ತದೆ. ಅದರ ಪರಿಣಾಮ ಅನೇಕರು ರಕ್ತದೋಕುಳಿಯಲ್ಲಿ ಅಂಗವಿಕಲರಾಗುತ್ತಾರೆ.



ಕೆಲವು ಮುಗ್ಧರು ಜೀವ ತೆರುತ್ತಾರೆ. ಇಂತಹ ದುಷ್ಟ ಪ್ರವೃತ್ತಿಯನ್ನು ಆದಷ್ಟು ಜಾಗ್ರತೆ ಬುಡ ಸಮೇತ ಕಿತ್ತೆಸೆಯಬೇಕಾದದ್ದು ಎಲ್ಲರ ಆದ್ಯ ಕರ್ತವ್ಯ. ಇದುರಾಷ್ಟ್ರದ ಅಥವಾ ಸರ್ಕಾರದ ಕೆಲಸವೆಂದು ಸುಮ್ಮನಿರದೆ, ಜನರ ಅಂತರಾಳದಿಂದ ಬಂದಾಗ ಮಾತ್ರ ಹೆಚ್ಚು ಪರಿಣಾಮಕಾರಿಯಾಗುತ್ತದೆ.

ಪರಧರ್ಮ ಸಹಿಷ್ಣುತೆ, ಕೋಮು ಸೌಹಾರ್ದ ಹಾಗೂ ವಿಶ್ವ ಮಾನವತ್ವದ ಜ್ಯೋತಿಯನ್ನು ಬೆಳಗಿಸುವ ಮೂಲಕ ವಿಶ್ವಶಾಂತಿಗಾಗಿ ಪ್ರಯತ್ನಿಸಬೇಕಾದ ಕಾಲ ಸನ್ನಿಹಿತವಾಗಿದೆ. ಈ ಮಹತ್ಕಾರ್ಯಕ್ಕೆ ಯಾರೂ ಯಾವ ದೊಡ್ಡ ತ್ಯಾಗವನ್ನೂ ಮಾಡಬೇಕಾಗಿಲ್ಲ. ಜನರಲ್ಲಿ ಅರಿವು ಮೂಡಿಸಿ, ಆತ್ಮೀಯತೆ ಬೆಳೆಸಲು ವ್ಯವಸ್ಥಿತರೀತಿಯಲ್ಲಿ ಪ್ರಯತ್ನಿಸಬೇಕಷ್ಟೆ. ಈ ಗುರಿ ಸಾಧಿಸಲು ಕೆಳ ಕಂಡ ಮಾರ್ಗಗಳಲ್ಲಿ ಅವರವರ ಪರಿಸರಕ್ಕೆ ಹೊಂದಿಕೊಳ್ಳುವಂತಹ ರೀತಿಯಲ್ಲಿ ಪ್ರಯತ್ನಿಸಬಹುದು.

1) ಎಲ್ಲಾ ಊರುಗಳಲ್ಲಿ ಹಾಗೂ ನಗರದ ವಿವಿಧ ಬಡಾವಣೆಗಳಲ್ಲಿ 'ವಿಶ್ವಶಾಂತಿ ಮಂಡಲಿ"ಅಥವಾ ಅವರಿಗೆ ಸೂಕ್ತವೆನಿಸಿದ ಹೆಸರಿನಲ್ಲಿ ಸಂಸ್ಥೆ ಸ್ಥಾಪಿಸಿ ಕೊಳ್ಳುವುದು

2 ಈ ಸಂಸ್ಥೆಯಲ್ಲಿ ಪ್ರತಿ ತಿಂಗಳೂ ನಿಗದಿಯಾದ ದಿನ ಹಾಗೂ ಸಮಯಕ್ಕೆ ಅಥವಾ ಹಬ್ಬಹರಿದಿನಗಳಲ್ಲಿ ಸೇರಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು.

3 ಎಲ್ಲ ಧರ್ಮದವರು ಸಂಘಟನೆಗೊಂಡು ಒಂದೊಂದು ಬಾರಿ ಒಂದೊಂದು ಧರ್ಮದ ಹಬ್ಬವನ್ನು ಅಚರಿಸುವುದು, ಅಥವಾ ದಾರ್ಶನಿಕರ ಬಗ್ಗೆ ಉಪನ್ಯಾಸ ಏರ್ಪಡಿಸುವುದು.

4 ಒಂದು ಜನಂಗದ ಮನೆಯಲ್ಲಿ ಇನ್ನೊಂದು ಜನಾಂಗದವರ ಹಬ್ಬವನ್ನು ಆಚರಿಸಿ ಮೂರನೆಯ ಜನಾಂಗದವರಿಂದ ಆ ಬಗ್ಗೆ ಉಪನ್ಯಾಸ ಏರ್ಪಡಿಸುವುದು. ಸಮಾರಂಭ ಬಹಳ ಸರಳವಾಗಿದ್ದು ಏರ್ಪಡಿಸಿದವರಿಗೆ ಹೊರೆ ಯಾಗದೆ, ಸ್ವಸಂತೋಷದಿಂದ ನಡೆಸಿ ಕೊಡುವಂತಿರಬೇಕು. ಇತರರೂ ಅನುಕರಿಸುವಂತಿರಬೇಕು.

5 ಜಾತ್ಯಾತೀತತೆ ಬೆಳೆಯಲು ಅಂತರ ಜಾತೀಯ ವಿವಾಹಿತರು ಬುನಾದಿಯಾಗಿದ್ದಾರೆ. ಆದುದರಿಂದ ಅಂತಹವರ ಸಮ್ಮೇಳನ ನಡೆಸಿ ಆ ಬಗ್ಗೆ ಒಂದು ಪುಸ್ತಕ ಹೊರ ತರುವುದು. ಅಥವಾಇನ್ನಾವುದಾದರೂ ರೀತಿಯಲ್ಲಿ ಅವರ ದೃಷ್ಟಿ ವೈಶಾಲ್ಯತೆಯನ್ನು ಪ್ರೋತ್ಸಾಹಿಸುವುದು.

6 ಅಂತರ ಜಾತೀಯ ವಿವಾಹಿತರ ಮಕ್ಕಳು ಜಾತ್ಯಾತೀತ ರಾಷ್ಟ್ರದ ದ್ಯೋತಕ ಕಿರಣಗಳು, ಅಂತಹವರಿಗೆ ಸವಲತ್ತು ಪ್ರೋತ್ಸಾಹಗಳು ಅಧಿಕಗೊಳ್ಳಬೇಕು.

7 ಅರ್ಜಿಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಜಾತಿಯ ವಿಷಯವನ್ನು ತೆಗೆದು ಹಾಕಬೇಕು.

8 ಕೋಮು ಸಂಘರ್ಷಗಳು ನಡೆಯದಂತೆ ಪ್ರಯತ್ನಿಸುವುದು. ಆಕಸ್ಮಾತ್ ನಡೆದರೆ ಈ ಸಂಸ್ಥೆಯವರು ಆ ಸ್ಥಳಕ್ಕೆ ಭೇಟಿ ಕೊಟ್ಟು ಶಾಂತಿ, ಸೌಹಾರ್ದತೆ ನೆಲಸಲು ಪ್ರಯತ್ನಿಸುವುದು.

9 ಒಂದು ಜ್ಯೋತಿಯಿಂದ ಇನ್ನೊಂದು ಹಣತೆಹಚ್ಚಿ ಜ್ಯೋತಿಯಾಗುವಂತೆ ಬೇರೆ ಬೇರೆ ಇಂತಹ ಸಂಸ್ಥೆಗಳನ್ನು ಸ್ಥಾಪಿಸಲು ಪ್ರಯತ್ನಿಸಬೇಕು. ಇಂತಹ ಕಾರ್ಯಗಳಿಗೆ ಶ್ರಮಿಸುವ ವ್ಯಕ್ತಿ ಸಂಸ್ಥೆಗಳಿಗೆ ಸಾಧ್ಯವಾದಷ್ಟು ಸಹಾಯ, ಸಹಕಾರ, ಪ್ರೋತ್ಸಾಹಗಳನ್ನು ನೀಡಬೇಕು.

10 ಈ ಬಗ್ಗೆ ಅರಿವು ಮುಡಿಸಲು ಎಲ್ಲ ಪ್ರಚಾರ ಮಾಧ್ಯಮಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳತಕ್ಕದ್ದು.

ಅನೇಕ ಸಂಸ್ಥೆಗಳಲ್ಲಿ ಹಣ ಅಧಿಕಾರ, ಸ್ವಪ್ರತಿಷ್ಠೆ ಪರರ ನಿಂದನೆ, ದ್ವೇಷ, ಅಸೂಯೆ ....ಮುಂತಾದ ಕಾಯಿಲೆಗಳು ಕಾಣಿಸಿ ಕೊಳ್ಳುವುದು ಸರ್ವೇ ಸಾಮಾನ್ಯ. ಆದುದರಿಂದ ಸಂಘ, ಅಧ್ಯಕ್ಷ, ಕಾರ್ಯದರ್ಶಿ, ಸದಸ್ಯ, ಹಣವಸೂಲಿ.......ಮುಂತಾದವುಗಳಿಗೆ ಅವಕಾಶ ನೀಡದೆ, ಒಂದು ಕಾರ್ಯಕ್ರಮಕ್ಕೆ ಸಂಘಟನೆ, ನಂತರ ವಿಸರ್ಜನೆ ಹಾಗೂ ಭಾಗಿಗಳಾಗುವವರಿಗೆಲ್ಲಾ ಸಮಾನ ಜವಾಬ್ದಾರಿ, ಗೌರವ ಇರತಕ್ಕದ್ದು. ಯಾರನೂ ಹಣದಿಂದ ಅಳೆಯ ಬಾರದು. ಆತ್ಮೀಯ ಅಡಿಪಾಯದಲ್ಲಿ, ಶಾಂತಿ, ಸೌಹಾರ್ದ ವಾತಾವರಣದಲ್ಲಿ, ದೇವಸ್ಥಾನದಲ್ಲಿ ನಡೆಯುವ ಭಕ್ತಿ, ಭಜನೆ, ಪೂಜೆಗಳ ಮಾದರಿಯಲ್ಲಿ ಸೇವೆ ಸಲ್ಲಿಸಬೇಕು. ಈ ಅಂದೋಲನ ರಾಷ್ಟ್ರ ವ್ಯಾಪಿಯಾಗಿ, ಕ್ರಮೇಣ ವಿಶ್ವದ ಎಲ್ಲ ಭಾಗಗಳಿಗೂ ತಲುಪಬೇಕು- ಬೆಂಕಿಯಾಗುತ್ತಿರುವ ಧರ್ಮವನ್ನು ಬೆಳಕನ್ನಾಗಿಸಲು ಪ್ರಾಮಾಣಿಕ ಪ್ರಯತ್ನ ಮಾಡೋಣ. ತಪ್ಪು ಕಾಣುವ ಮಟ್ಟಕ್ಕೆ ಇಳಿಯದೆ ಮೆಚ್ಚುಗೆ ಸೂಚಿಸುವ ಮಟ್ಟಕ್ಕೆ ಏರೋಣ.

ವಿಶ್ವ ಶಾಂತಿ–ನಮ್ಮ ಧ್ಯೇಯ.

---

**ಡಾ|| ಅಶ್ವತ್**, ನಂ 1543, 2 ನೇ ಅಡ್ಡ ರಸ್ತೆ, 16 ನೇ ಮುಖ್ಯ ರಸ್ತೆ, 2 ನೇ ಹಂತ
ಜೆ.ಪಿ. ನಗರ, ಬೆಂಗಳೂರು-78



# ಸ್ವಶಕ್ತಿಯನ್ನು ಸರಿಯಾಗಿ ಬಳಸಿಕೊಳ್ಳಿ

ಜಗತ್ತಿನಲ್ಲಿ ಜನಿಸಿ ಮಾನವ ಜೀವನಕ್ಕೆ ಏನಾದರೂ ಕಾಣಿಕೆಯಿತ್ತು ಮರೆಯಾದ ವ್ಯಕ್ತಿಗಳೆಲ್ಲರೂ ಸ್ವಶಕ್ತಿಯನ್ನು ಸರಿಯಾಗಿ ಬಳಸಿಕೊಳ್ಳುತ್ತಿದ್ದರು. ಸ್ವಂತ ಶಕ್ತಿಯನ್ನು ವ್ಯವಸ್ಥಿತವಾಗಿ ಉಪಯೋಗಿಸಲು ತಿಳಿದು ಸ್ವಾವಲಂಬಿಗಳೆನಿಸಬಲ್ಲ ಜನರೇ ಈ ಪ್ರಪಂಚವನ್ನು ಮುನ್ನಡೆಸಬಲ್ಲರು. ಸ್ವಶಕ್ತಿಯನ್ನು ಸರಿಯಾಗಿ ಬಳಸುವ ಜನರಿಂದೊಡಗೂಡಿದ ರಾಷ್ಟ್ರ ಎಂದಿಗೂ ಗುಲಾಮಗಿರಿಗೊಳಗಾಗದು. ಸ್ವಶಕ್ತಿಯನ್ನು ವ್ಯವಸ್ಥಿತಗೊಳಿಸುವ ಮಾಲೀಕನನ್ನು ಪಡೆದ ಮನೆ ನಿರಂತರ ಅಭಿವೃದ್ಧಿಹೊಂದುತ್ತ ಹೋಗುವುದರಲ್ಲಿ ಸಂದೇಹವಿಲ್ಲ.

ಕಲ್ಯಾಣರಾಯರು ಉತ್ತಮ ಕಂಪೆನಿಯೊಂದರಲ್ಲಿ ಕೆಲಸಕ್ಕಿದ್ದಾರೆ. ತಮ್ಮ ಕೆಲಸದ ಬಗ್ಗೆ ಅವರಿಗೆ ಒಳ್ಳೇ ಅನುಭವವಿದೆ. ಅವರ ವ್ಯವಸ್ಥಾಶಕ್ತಿಯನ್ನು ಎಲ್ಲರೂ ಹೊಗಳುತ್ತಾರೆ. ಯಾವ ಕೆಲಸದ ಹೊಣೆ ಒಪ್ಪಿಸಿದರೂ, ಅವರದನ್ನು ತಕ್ಕರೀತಿಯಲ್ಲಿ ನೆರವೇರಿಸುವರೆಂಬ ದೃಢವಿಶ್ವಾಸ ಕಂಪೆನಿಯವರಿಗಿದೆ. ಆದ್ದರಿಂದ ಹೊಸಯೋಜನೆಯನ್ನೇನಾದರೂ ಅವರು ಸಂಚಾಲಕರೆದುರು ಇಟ್ಟರೆಂದರೆ, ಸಂಚಾಲಕರು ಒಂದಿಷ್ಟು ಸಂದೇಹಿಸದೆ ಒಪ್ಪಿಕೊಳ್ಳುತ್ತಾರೆ.

ಆದರೆ ಈ ಕಲ್ಯಾಣರಾಯರನ್ನೇ ನೀವು ಅವರ ಮನೆಯಲ್ಲಿ ನೋಡಿರಿ. ಆ ವ್ಯವಸ್ಥಾಪ್ರಿಯರಾದ ಕಲ್ಯಾಣರಾಯರು ಇವರೆ ? ಎಂದು ನೀವು ಬೆರಗಾಗುವಷ್ಟು ಅವರು ಬದಲಾಗಿರುತ್ತಾರೆ.

ತಮ್ಮ ಮನೆಯಲ್ಲಿ ಒಂದು ತಂಬಿಗೆ ನೀರು ತರುವುದಕ್ಕೂ ಅವರು ನಾಚುತ್ತಾರೆ. ಊಟದ ಬಳಿಕ ಇವರು ತಮ್ಮ ಬಟ್ಟಲನ್ನು ತಾವೇ ಒಯ್ಯುವುದಿಲ್ಲ. ದಿನಪತ್ರಿಕೆ ಓದಿದಬಳಿಕ ಅದರ ಹಾಳೆಗಳನ್ನು ಹಾಗೆಯೇ ಅಸ್ತವ್ಯಸ್ತವಾಗಿ ಬಿಟ್ಟು ಹೋಗುತ್ತಾರೆ. ಯಾವ ವಸ್ತುವನ್ನಾದರೂ ತೆಗೆದನಂತರ, ಅದನ್ನು ಮೊದಲಿನ ಜಾಗದಲ್ಲೆ ಇಟ್ಟು ಬಿಡುವ ಅಭ್ಯಾಸವೇ ಇಲ್ಲ. ಆ ಕೆಲಸಗಳನ್ನೆಲ್ಲ ವಿದ್ಯಾಭ್ಯಾಸದಲ್ಲಿ ಮಗ್ನನಾದ ಮಗನೋ ಆಟದಲ್ಲೇ ವೇಳೆ ಕಳೆಯುವ ಅವರ ಕಿರಿಯ ಮಗಳೋ, ಒಂದು ನಿಮಿಷವೂ ಬಿಡುವಿಲ್ಲದ ಹೆಂಡತಿಯೋ ಮಾಡಬೇಕಾಗುತ್ತದೆ.

ಈ ಎಲ್ಲ ವಿಷಯಗಳೂ ಅತಿ ಕ್ಷುಲ್ಲಕವೆಂದು ನೀವು ಹೇಳಬಹುದು. ಆದರೆ ಇವುಗಳಿಂದಾಗಿಯೇ ಮನೆಯ ಇತರ ಜನ ಅದೆಷ್ಟು ಕಷ್ಟಪಡಬೇಕಾಗುವುದೆಂಬ ಕಲ್ಪನೆಯೇ ನಿಮಗಿರುವುದಿಲ್ಲ. ಅವರ ಹೆಂಡತಿಗೆ ಹಗಲಲ್ಲಿ ಸಿಗುವ ಒಂದೆರಡು

ತಾಸುಗಳ ಬಿಡುವೂ ಈ ಅವ್ಯವಸ್ಥೆಗಳಿಂದಾಗಿ ತಪ್ಪಿಹೋಗುತ್ತದೆ. ಮಗ ತಂದೆಯ ಈ ಸಣ್ಣಪುಟ್ಟ ಕೆಲಸಗಳನ್ನು ಮುಗಿಸಬೇಕಾಗುವುದರಿಂದ ವಿದ್ಯಾಭ್ಯಾಸಕ್ಕೆ ಅಡಚಣೆ ಉಂಟಾಗುತ್ತದೆ. ಕಿರಿಮಗಳು ತನ್ನ ಆನಂದಕ್ಕೊದಗುವ ಈ ತೊಡುಕುಗಳನ್ನು ಕಂಡು ಮನದಲ್ಲೇ ಸಿಡುಗುಟ್ಟುತ್ತಾಳೆ.

ಕಲ್ಯಾಣರಾಯರಿಗೆ ತಮ್ಮ ವ್ಯವಸ್ಥಾಶಕ್ತಿಯಿಂದಾಗಿ ಆಫೀಸಿನಲ್ಲಿ ದೊರೆಯುವ ಸನ್ಮಾನ ಅವರ ಸ್ವಾಭಾವಿಕ ಪ್ರವೃತ್ತಿಯ ದ್ಯೋತಕವಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಕಾರ್ಯಾಲಯದಲ್ಲಿ ಅವರು ಯೋಗ್ಯರೀತಿಯಿಂದ ಕೆಲಸಮಾಡಲು ಅವರಿಗೆ ಸಿಗುವ ಪ್ರಶಂಸೆಯೂ ತತ್ಪರಿಣಾಮವಾದ ದೊಡ್ಡ ಸಂಬಳವೂ ಕಾರಣವಾಗಿದೆ. ತಾವು ತಮ್ಮ ಯೋಗ್ಯತೆಯನ್ನು ತೋರ್ಪಡಿಸದಿದ್ದರೆ ತಮಗೆ ಸನ್ಮಾನ ಹಾಗೂ ದೊಡ್ಡಸಂಬಳ ದೊರೆಯದೆಂಬ ಭಯವೂ ಅವರಿಗಿರುತ್ತದೆ.

ಪ್ರೇಮಪ್ರಾಪ್ತಿ, ಯಶೋಲಾಲಸೆ ಹಾಗೂ ಭಯ ಅವರನ್ನು ಕಾರ್ಯಾಲಯದಲ್ಲಿ ಯೋಗ್ಯ ಕೆಲಸಗಾರರನ್ನಾಗಿ ಮಾಡಿದೆ. ಆದರೆ ಮನೆಯಲ್ಲಿ ಈ ಮೂರರಲ್ಲಿ ಯಾವುದೂ ಇಲ್ಲ. ಹೀಗಾಗಿ ಮನೆಯಲ್ಲಿ ಅವರ ಮೂಲಸ್ವಭಾವ ಪ್ರಕಟಗೊಳ್ಳುತ್ತದೆ. ಅವರ ಕಾರ್ಯಶಕ್ತಿ ಅವರ ನೈಸರ್ಗಿಕ ಸ್ವಭಾವದಿಂದ ಪ್ರೇರಿತವಾದುದಲ್ಲ. ಆದ್ದರಿಂದ ಮನೆಯಲ್ಲಿ ಅವರ ನೈಸರ್ಗಿಕ ಸ್ವಭಾವವೇ ಕಾಣಿಸಿಕೊಳ್ಳುತ್ತದೆ.

ಕಾರ್ಯಾಲಯದಲ್ಲಿ ತಾವು ಉಪಯೋಗಿಸುವ ಶಕ್ತಿಯನ್ನು ಮನೆಯಲ್ಲಿ ಉಪಯೋಗಿಸುತ್ತಿಲ್ಲವೆಂಬುದು ಕಲ್ಯಾಣರಾಯರ ಜೀವನದಿಂದ ನಮಗೆ ತಿಳಿದು ಬರುತ್ತದೆ.

ಈ ರೀತಿಯ ಜನ ನಮ್ಮಲ್ಲಿ ಹಲವರಿದ್ದಾರೆ. ಕಾರ್ಖಾನೆಯಲ್ಲಿ ಎಂಟೆಂಟು ತಾಸು ಕೆಲಸ ಮಾಡುವ ಕೂಲಿಗಾರ ಮನೆಯಲ್ಲಿ ಅರ್ಧತಾಸೂ ದುಡಿಯುವುದಿಲ್ಲ. ಆಫೀಸಿನಲ್ಲಿ ದಿನವಿಡೀ ಬರವಣಿಗೆಯಕೆಲಸದಲ್ಲಿ ಮುಳುಗಿರುವ ಗುಮಾಸ್ತ ರಜೆಯ ಮೇಲೆ ಮನೆಗೆ ಬಂದಾಗ ಗೆಳೆಯರ ಪತ್ರಗಳಿಗೂ ಉತ್ತರ ಬರೆಯದಷ್ಟು ಸೋಮಾರಿಯಾಗುವ. ಅಫೀಸಿನಲ್ಲಿ ಕಸಗುಡಿಸುವ ಪೇದೆ ಮನೆಯಲ್ಲಿ ತನ್ನ ಮಗುವನ್ನು ಸ್ವಲ್ಪಹೊತ್ತಾದರೂ ಎತ್ತಿಕೊಳ್ಳುವುದಿಲ್ಲ. ಶ್ರೀಮಂತ ಮನೆಗಳಲ್ಲಿ ಅಡುಗೆ ಮಾಡುವ ಮನುಷ್ಯ ಮನೆಯ ಡುಗೆಯಲ್ಲಿ ಹೆಂಡತಿಗೆ ಸ್ವಲ್ಪಾದರೂ ಸಹಾಯಮಾಡಲಾರ.

ಈ ಎಲ್ಲ ವಿಷಯಗಳನ್ನು ಪರಿಶೀಲಿಸಿದರೆ ನಮ್ಮೆಲ್ಲ ಕೆಲಸಗಳಿಗೂ ಬಾಹ್ಯಶಕ್ತಿಯ ಪ್ರೇರಣೆ ಅನಿವಾರ್ಯವೆಂದೂ ಸ್ವಶಕ್ತಿಯಿಂದ ಪ್ರೇರಿತರಾಗುವುದು ಅಸಂಭವವೆಂದೂ ನಮಗನಿಸುತ್ತದೆ.



ಇಂಥ ಸ್ಥಿತಿ ನಮ್ಮ ರಾಷ್ಟ್ರೀಯ ಜೀವನದ ಮೇಲೂ ದುಷ್ಪ್ರಭಾವ ಬೀರುತ್ತದೆ. ನಮ್ಮ ದೇಹಸ್ಥಿತಿಯನ್ನು ಇದು ಕೆಡಿಸುತ್ತದೆಯೆಂದರೆ ಅತಿಶಯೋಕ್ತಿಯಲ್ಲ. ನಮ್ಮ ನಡವಳಿಕೆಯ ಈ ವಿಭಜನೆಯಿಂದಾಗಿ ನಾವು ಪರೋಕ್ಷವಾಗಿ ರಾಷ್ಟ್ರೀಯ ಜೀವನಕ್ಕೆ ಹಾನಿ ಉಂಟುಮಾಡುತ್ತಿದ್ದೇವೆಂಬುದನ್ನು ನಾವು ಅರಿತಿಲ್ಲ.

ಈ ರೀತಿಯ ಮನೋವೃತ್ತಿಯಿಂದಾಗಿಯೇ ಹೊಸ ಹೊಸ ಸಂಶೋಧನೆ ನಡೆಸುವುದಾಗಲೀ ಸ್ವತಂತ್ರ ಉದ್ದಿಮೆ ಕೈಗೊಳ್ಳುವುದಾಗಲೀ ಆಕಸ್ಮಿಕ ಸಂಕಟವನ್ನು ನಗು ನಗುತ ಇದಿರುಸುವುದಾಗಲೀ ನಮಗೆ ಸಾಧ್ಯವಾಗುತ್ತಿಲ್ಲ. ಆದರೆ ಈ ಎಲ್ಲ ವಿಶೇಷತೆಗಳೇ ನಮ್ಮ ಮಾನಸಿಕ ಹಾಗೂ ಚಾರಿತ್ರಿಕ ಸ್ವಾಸ್ಥ್ಯವನು ದೃಢಗೊಳಿಸಬಲ್ಲವು.

ಕಲ್ಯಾಣರಾಯರನ್ನು ಆ ಉದ್ಯೋಗದಿಂದ ತೆಗೆದುಹಾಕಿದರೆ...........? ಆಗ ಅವರು ಇನ್ನೊಂದು ಉದ್ಯೋಗಕ್ಕಾಗಿ ಚಡಪಡಿಸುವರು. ಆ ಉದ್ಯೋಗ ದೊರೆಯುವವರೆಗೆ ಅವರ ಮನಸ್ಸಿನ ಗಾಬರಿ ದೂರಾಗದು; ಒಂದಿಷ್ಟು ಮನಃ ಶಾಂತಿ ಉಳಿಯದು. ಇಷ್ಟೆಲ್ಲ ಶಕ್ತಿಸಾಮಾರ್ಥ್ಯಗಳಿಂದ ಕೂಡಿದ ಮನುಷ್ಯ ಇಷ್ಟೇಕೆ ಗಾಬರಿಯಾಗುತ್ತಾನೆ. ಏಕೆಂದರೆ ಆತ ಸ್ವಯಂಪ್ರೇರಿತನಾಗಲು ಅರಿತಿಲ್ಲ?

ಆದ್ದರಿಂದ ನೀವು ಸ್ವಸ್ಥ, ಸುಖ ಹಾಗೂ ಸಮತೋಲನದ ಬದುಕನ್ನು ಬಾಳಬೇಕೆಂದಿರುವಿರಾದರೆ, ಸ್ವಶಕ್ತಿಯನ್ನು ಸರಿಯಾಗಿ ಬಳಸಿಕೊಳ್ಳಿರಿ. ಇದರಿಂದ ನಿಮಗೆ ಶಾರೀರಿಕ ಹಾಗೂ ಮಾನಸಿಕ ದಾರ್ಢ್ಯ ಸಿಗುವುದಲ್ಲದೆ, ನಿಮ್ಮ ಪ್ರತಿಯೊಂದು ಕಾರ್ಯದಲ್ಲೂ ಸೌಂದರ್ಯ ಕಾಣಿಸಿಕೊಳ್ಳುವುದು. ನಿಮ್ಮ ಇಡೀ ಜೀವನವನ್ನೇ ಸ್ವರ್ಣಮಯಗೊಳಿಸುವ ಶಕ್ತಿ ಅದಕ್ಕಿದೆ. ಇದನ್ನೇ ನಾವು ಸ್ವರ್ಗಸುಖವೆಂದು ಕರೆಯಬಹುದು. ಸ್ವಶಕ್ತಿಯ ಯೋಗ್ಯ ಉಪಯೋಗದ ಮೂಲಕ ನೀವು ಈ ಭೂಮಿಯಲ್ಲೇ ಸ್ವರ್ಗೀಯ ಸುಖವನ್ನನುಭವಿಸಬಹುದು.

(ಹಿಂದಿಯಿಂದ)

---

ಬಿ. ಸುಬ್ರಾಯ ಅಡಿಗ, ನಿವೃತ್ತಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ.



## ಬಸವತತ್ತ್ವ ರತ್ನಾಕರ — 27
## (ವಚನಕಾವ್ಯ ಸುಧಾಸಾಗರ)

### ಶ್ರೀ ಮಡಿವಾಳ ಮಾಚಿದೇವರ ಸಂದೇಶ [253]

ವೀರಶ್ರೀಗಂಗೆ "ಎನ್ನ ಸ್ಥೂಲಕಾಯಕ್ಕೆ ಇಷ್ಟಲಿಂಗವಾದನಯ್ಯಾ ಬಸವಣ್ಣ.
ಎನ್ನ ಸೂಕ್ಷ್ಮ ಕಾಯಕ್ಕೆ ಪ್ರಾಣಲಿಂಗವಾದನಯ್ಯಾ ಬಸವಣ್ಣ.
ಎನ್ನ ಕಾರಣಕಾಯಕ್ಕೆ ಭಾವಲಿಂಗವಾದನಯ್ಯಾ ಬಸವಣ್ಣ.
ಎನ್ನ ನೋಟಕ್ಕೆ ಇಷ್ಟಲಿಂಗವಾದನಯ್ಯಾ ಬಸವಣ್ಣ.
ಎನ್ನ ಮನಕ್ಕೆ ಪ್ರಾಣಲಿಂಗವಾದನಯ್ಯಾ ಬಸವಣ್ಣ.
ಎನ್ನ ಭಾವಕ್ಕೆ ತೃಪ್ತಿಲಿಂಗವಾದನಯ್ಯಾ ಬಸವಣ್ಣ.
ಎನ್ನ ನಾಶಿಕಕ್ಕೆ ಆಚಾರಲಿಂಗವಾದನಯ್ಯಾ ಬಸವಣ್ಣ.
ಎನ್ನ ಜಿಹ್ವೆಗೆ ಗುರುಲಿಂಗವಾದನಯ್ಯಾ ಬಸವಣ್ಣ.
ಎನ್ನ ನೇತ್ರಕ್ಕೆ ಶಿವಲಿಂಗವಾದನಯ್ಯಾ ಬಸವಣ್ಣ.
ಎನ್ನ ತ್ವಕ್ಕಿಂಗೆ ಜಂಗಮಲಿಂಗವಾದನಯ್ಯಾ ಬಸವಣ್ಣ.
ಎನ್ನ ಶ್ರೋತ್ರಕ್ಕೆ ಪ್ರಸಾದಲಿಂಗವಾದನಯ್ಯಾ ಬಸವಣ್ಣ.
ಎನ್ನ ಹೃದಯಕ್ಕೆ ಮಹಾಲಿಂಗವಾದನಯ್ಯಾ ಬಸವಣ್ಣ.
ಎನ್ನ ಸುಚಿತ್ತವೆಂಬ ಹಸ್ತಕ್ಕೆ ಆಚಾರಲಿಂಗವಾದನಯ್ಯಾ ಬಸವಣ್ಣ.
ಎನ್ನ ಸುಬುದ್ಧಿಯೆಂಬ ಹಸ್ತಕ್ಕೆ ಗುರುಲಿಂಗವಾದನಯ್ಯಾ ಬಸವಣ್ಣ.
ಎನ್ನ ನಿರಹಂಕಾರವೆಂಬ ಹಸ್ತಕ್ಕೆ ಶಿವಲಿಂಗವಾದನಯ್ಯಾ ಬಸವಣ್ಣ.
ಎನ್ನ ಸುಮನ ಎಂಬ ಹಸ್ತಕ್ಕೆ ಜಂಗಮಲಿಂಗವಾದನಯ್ಯಾ ಬಸವಣ್ಣ.
ಎನ್ನ ಸುಜ್ಞಾನವೆಂಬ ಹಸ್ತಕ್ಕೆ ಪ್ರಾಣಲಿಂಗವಾದನಯ್ಯಾ ಬಸವಣ್ಣ.
ಎನ್ನ ಸದ್ಭಾವವೆಂಬ ಹಸ್ತಕ್ಕೆ ಮಹಾಲಿಂಗವಾದನಯ್ಯಾ ಬಸವಣ್ಣ
ಎನ್ನ ಆಧಾರ ಚಕ್ರದಲ್ಲಿ ಆಧಾರಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.
ಎನ್ನ ಸ್ವಾಧಿಷ್ಠಾನ ಚಕ್ರದಲ್ಲಿ ಗುರುಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.
ಎನ್ನ ಮಣಿಪೂರಕ ಚಕ್ರದಲ್ಲಿ ಶಿವಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.
ಎನ್ನ ಅನಾಹತ ಚಕ್ರದಲ್ಲಿ ಜಂಗಮಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.



ಎನ್ನ ವಿಶುದ್ಧಿ ಚಕ್ರದಲ್ಲಿ ಪ್ರಸಾದಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.
ಎನ್ನ ಆಜ್ಞಾ ಚಕ್ರದಲ್ಲಿ ಮಹಾಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.
ಎನ್ನ ಬ್ರಹ್ಮರಂಧ್ರದಲ್ಲಿ ನಿಷ್ಕಲಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.
ಎನ್ನ ಶಿಖಾ ಚಕ್ರದಲ್ಲಿ ಶೂನ್ಯಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.
ಎನ್ನ ಪಶ್ಚಿಮ ಚಕ್ರದಲ್ಲಿ ನಿರಂಜನಲಿಂಗವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ.

ಎನ್ನ ವದನಕ್ಕೆ ಓಂಕಾರವಾದನಯ್ಯಾ ಬಸವಣ್ಣ.
ಎನ್ನ ಬಲದ ಭುಜಕ್ಕೆ ಮಕಾರವಾದನಯ್ಯಾ ಬಸವಣ್ಣ.
ಎನ್ನ ಒಡಲಿಂಗೆ ಶಿಕಾರವಾದನಯ್ಯಾ ಬಸವಣ್ಣ.
ಎನ್ನ ಬಲದ ಪಾದಕ್ಕೆ ವಕಾರವಾದನಯ್ಯಾ ಬಸವಣ್ಣ.
ಎನ್ನ ಎಡದ ಪಾದಕ್ಕೆ ಯಕಾರವಾದನಯ್ಯಾ ಬಸವಣ್ಣ.
ಎನ್ನ ಆಪಾದ ಮಸ್ತಕ ಪರಿಯಂತರ ಮಂತ್ರರೂಪ ಸಂಬಂಧವಾದನಯ್ಯಾ ಬಸವಣ್ಣ.

ಎನ್ನ ನಾದಕ್ಕೆ ಅಕಾರವಾದನಯ್ಯಾ ಬಸವಣ್ಣ.
ಎನ್ನ ಬಿಂದುವಿಗೆ ಉಕಾರವಾದನಯ್ಯಾ ಬಸವಣ್ಣ.
ಎನ್ನ ಕಳೆಗೆ ಮಕಾರವಾದನಯ್ಯಾ ಬಸವಣ್ಣ.
ಎನ್ನ ರುಧಿರಕ್ಕೆ ನಕಾರವಾದನಯ್ಯಾ ಬಸವಣ್ಣ.
ಎನ್ನ ಮಾಂಸಕ್ಕೆ ಮಕಾರವಾದನಯ್ಯಾ ಬಸವಣ್ಣ
ಎನ್ನ ಮೇದಸ್ಸಿಂಗೆ ಶಿಕಾರವಾದನಯ್ಯಾ ಬಸವಣ್ಣ.
ಎನ್ನ ಅಸ್ಥಿಗೆ ವಕಾರವಾದನಯ್ಯಾ ಬಸವಣ್ಣ
ಎನ್ನ ಮಜ್ಜೆಗೆ ಯಕಾರವಾದನಯ್ಯಾ ಬಸವಣ್ಣ.
ಎನ್ನ ಸರ್ವಾಂಗಕ್ಕೆ ಓಂಕಾರವಾದನಯ್ಯಾ ಬಸವಣ್ಣ.
ಇಂತು ಬಸವಣ್ಣನೆ ಪರಿಪೂರ್ಣನಾಗಿ,
ಬಸವಣ್ಣನೆ ಪ್ರಾಣವಾಗಿ, ಬಸವಣ್ಣನೆ ಅಂಗವಾಗಿ,
ಬಸವಣ್ಣನೆ ಲಿಂಗವಾಗಿದ್ದ ಕಾರಣ ನಾನು ಬಸವಣ್ಣ.
ಬಸವಣ್ಣ ಬಸವಣ್ಣ ಎಂದು ಬಯಲಾದೆನು ಕಾಣಾ ಕಲಿದೇವರ ದೇವಾ!
ಈ ವಚನಾಮೃತ–ಕಾಯಕನಿಷ್ಠ ಮಹಾನುಭಾವಿ

ಮಹಿಮಾಪುರುಷ ವೀರ ಶಿವಾಚಾರ ಸಂಪನ್ನ ಭಕ್ತಿ ಕುಶಲಮತಿ, ಭಕ್ತಶಿರೋಮಣಿ,
ಲಿಂಗಾಂಗ ಸಾಮರಸ್ಯಜ್ಞಾನಿ, ಪ್ರಮಥ ಪುಂಗವ ಶ್ರೀಮಡಿವಾಳ ಮಾಚಿದೇವರು
ಭುವನ ಭಾಗ್ಯವೆನಿಸ್ಪ ಶ್ರೀಬಸವೇಶ್ವರನೊಳ್ ಅತ್ಯಂತ ಭಕ್ತಿಯುಳ್ಳವರಾಗಿ,
ಸ್ವಾನು ಭಾವಿಗಳಾಗಿ, ನಿಜಸುಖ ಪಡೆದು ನಿರೂಪಿಸಿದ ದಿವ್ಯ ಶ್ರೀ ಬಸವ
ಲಿಂಗತತ್ವಾಮೃತ !
ಇಂತಪ್ಪ ಪೀಯೂಷಪಾನ ಮಾಡುವೊಡೆ "ಭವಚಕ್ರ" ದೂರಪ್ಪುದತಿ ?
ಹೇಳಾ ಶ್ರೀಶೈಲಮಲ್ಲಿಕಾರ್ಜುನ"

## ಶ್ರೀ ಹಡಪದ ಅಪ್ಪಣ್ಣನ ಸಂದೇಶ --- 254

ಬಸವಭಕ್ತಿಗಂಗೆ : " ಲಿಂಗಜಂಗಮ ಜಂಗಮ ಲಿಂಗವೆಂಬುದನು,
ಭೂಲೋಕ ಶಿವಲೋಕದಲ್ಲಿ ಬಸವಣ್ಣ ತಿಳಿದನಲ್ಲದೆ ಮತ್ತೆ
ಇನ್ನಾರು ಬಲ್ಲರಯ್ಯಾ ?
ಭೂಲೋಕ ಲಿಂಗಕ್ಕಾಧಾರವಾಗಲೆಂದವತರಿಸಿ ಬಂದನಯ್ಯಾ
ಬಸವಣ್ಣನು-
ಜಂಗಮ ಮುಖ ಲಿಂಗವೆಂಬುದನರಿದು ತನ್ನನರ್ಪಿಸಿ ಇದಿರ
ಕಳೆದು ಇರಬಲ್ಲನಯ್ಯಾ ಬಸವಣ್ಣನು-
ಲಿಂಗ ಮುಖವೆಲ್ಲ ನಷ್ಟವಾಗಿ ಭೃತ್ಯಾಚಾರವೆ ತನುವಾಗಿ
ಇರಬಲ್ಲನಯ್ಯಾ ಬಸವಣ್ಣನು
ಪ್ರಾಣಕಳೆ ತೀದು ಅಂತೂ ಜಂಗಮವೆ ಪ್ರಾಣವಾಗಿ
ಹಂಗು ಹರಿಯದೆ ಇರಬಲ್ಲನಯ್ಯಾ ಬಸವಣ್ಣನು-
ಉಪಾಧಿ ಎಂಬ ಕೀರ್ತಿವಾರ್ತೆಯನು ಜರಿದು
ನಿರುಪಾಧಿತವೆಂಬ ವಿದೇಶಕ್ಕೆ ಅತೀತನಾಗಿ
ಸಹಜ ದಾಸೋಹಿಯಾಗಿ ಇರಬಲ್ಲನಯ್ಯಾ ಬಸವಣ್ಣನು-
ಬಸವಪ್ರಿಯ ಕೂಡಲಸಂಗನ ಬಸವಣ್ಣನೆ ನಿಮಗೆ
(ಪ್ರಭುವಿಗೆ) ಭಕ್ತನಲ್ಲದೆ ಮತ್ತಾರನೂ ಕಾಣೆನಯ್ಯಾ.
ಈ ವಚನಾಮೃತ ಬಸವ ಭಕ್ತಿಭರಿತ ಶ್ರೀಹಡಪದ ಅಪ್ಪಣ್ಣಗಳ
ದಿವ್ಯ ಸಂದೇಶಾಮೃತ ! ಪಡೆಯಬಾರಾ ಶ್ರೀಶೈಲಮಲ್ಲಿಕಾರ್ಜುನ!

## ಶ್ರೀ ನೀಲಾಂಬಿಕೆಯ ಸಂದೇಶ --- 255

ಬಸವಧರ್ಮಗಂಗೆ : "ಆದಿಯಾಧಾರವಿಲ್ಲದಂದು, ನಾದ ಬಿಂದು ಕಳೆಗಳಿಲ್ಲದಂದು
ಕಾಮ ನಿಃಕಾಮವಿಲ್ಲದಂದು, ವೀರ ಸಂಚಲನವಿಲ್ಲದಂದು,
ಯುಗಜಗವಿಲ್ಲದಂದು, ಪಿಂಡಾಂಡ ಬ್ರಂಹ್ಮಾಂಡ ವಿಲ್ಲದಂದು,



ಏನೂ ಏನೂ ಇಲ್ಲದಂದು ಎಲ್ಲಾ ಮೂರ್ತಿಗಳು ನೆಲೆಗೆಳದಂದು
ಅಂದು ಏನೆಂದುಅರಿಯದಿರ್ದ ನಮ್ಮ ಬಸವರಾಜನು-
ಒಂದು ಗುಣವನೊಂದು ಅಕ್ಷರಕ್ಕೆ-
ತಂದಾನಯ್ಯಾ ನಮ್ಮ ಬಸವರಾಜನು-
ಆ ಅಕ್ಷರವ ರೂಪಮಾಡಿ, ತ್ರಯಾಕ್ಷರದಲ್ಲಿ-
ಕಳೆಯ ಸಂಬಂಧಿಸಿದಾತನಯ್ಯಾ ನಮ್ಮ ಬಸವರಾಜನು.
ಆ ಕಳೆಯ ಮೂರುತೆರನಾಗಿ ಮಾಡಿ
ಪೃಥ್ವಿ ಅಪ್ಪು ತೇಜವಾಯು ಆಕಾಶ ಎಂಬೀ ಪಂಚ ತತ್ವವೆ-
ಪಂಚವದನವಾಗಿ ಆಪಂಚವದನವೆ ಪಂಚೀಕೃತವನೆಯ್ದಿ,
ಜಗದಾದಿ ಸೃಷ್ಟಿಯನುಗೋಸುವುದಕ್ಕೆ ಕರ್ತನಾದನಯ್ಯಾ ನಮ್ಮ ಬಸವರಾಜನು,
ಆ ಸೃಷ್ಟಿಯ ಮುಖವ ನೋಡಿ ಸೃಜಿಸಲು ಜನಿಸಿದರು ಪಂಚಶಕ್ತಿಯರು
ಆ ಪಂಚಶಕ್ತಿಯರಿಗೆ ಪಂಚಮೂರ್ತಿಯರ ಕೈಗೊಳಿಸಿದಾತನಯ್ಯಾ ನಮ್ಮ ಬಸವರಾಜನು.
ಆ ಪಂಚ ಮೂರ್ತಿಗಳಿಂದುತ್ಪತ್ಯವಾದ ಲೋಕವ ನೋಡಲೆಂದು
ಕೈಲಾಸವನೆ ಕಲ್ಯಾಣವ ಮಾಡಿದಾತನಯ್ಯಾ ನಮ್ಮ ಬಸವರಾಜನು-
ಆ ಕೈಲಾಸವೇ ಕಲ್ಯಾಣವಾಗಲಾ ಕಲ್ಯಾಣಕ್ಕೆ
ಪ್ರಮಥ ಗಣಂಗಳ, ರುದ್ರಗಣಂಗಳ, ಅಮರಗಣಂಗಳ, ಪುರಾತನ ಗಣಂಗಳ
ಪುಣ್ಯಗಣಂಗಳ, ಮಹಾಗಣಂಗಳ, ಮುಖ್ಯಗಣಂಗಳು ಮಹಾಲಿಂಗೈಕ್ಯ ಸಂಪನ್ನರಂ
ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗ ಶರಣ ಐಕ್ಯರೆಂಬ
ಆಚಾರಾದಿ ಮಹಾಲಿಂಗ ಸಂಪನ್ನರಂ, ಷಟ್‌ಸ್ಥಲ ಪ್ರಸಾದ ಪ್ರಸನ್ನ ರೂಪರಂ,
ಆದಿ ಮುಕ್ತರಂ, ಅನಾದಿ ಮುಕ್ತರಂ ಅಜಾತರಂ, ಅಪ್ರಮಾಣರಂ
ಅನಿಮಿಷಲಿಂಗ ನಿರೀಕ್ಷಣರಂ, ತ್ರಿವಿಧ ವಿದೂರರಂ, ತ್ರಿವಿಧಲಿಂಗಾಂಗ ಮೂರ್ತಿಗಳಂ,
ಅರ್ಪಿತ ಸಂಯೋಗಂ, ಆಗಮ ವಿದರಂ
ಅನಾದಿಪರಶಿವಮೂರ್ತಿಗಳಂ, ಏಕಲಿಂಗ-
ನಿಷ್ಠಾಪರರು ಮಹಾಪ್ರಮಥ ಗಣಂಗಳಂ,
ತಂದು ನೆರಹಿದಾತನಯ್ಯಾ ನಮ್ಮ ಬಸವರಾಜನು.
ಮರ್ತ್ಯ ಲೋಕವನೆ ಮಹಾ ಪ್ರಮಥ ಬಿಡಾರವ
ಮಾಡಿದಾತನಯ್ಯಾ ನಮ್ಮ ಬಸವರಾಜನು.
ಆದಿಯ ಸೃಷ್ಟಿಯನಾದಿ ಸೃಷ್ಟಿಗೆ ತಂದು,
ಅನಾದಿ ಸೃಷ್ಟಿಯನಾದಿ ತಂದು,
ಅಜಾತನ ಬೀಡನಂಗದಲ್ಲಿ ನೆರಹಿದಾತನಯ್ಯಾ ನಮ್ಮ ಬಸವರಾಜನು-
ಭಾವವಿಲ್ಲದ ಭ್ರಮೆಯ ಭ್ರಮೆಗೊಳಿಸಿ,
ಭಾವಕ್ಕೆ ತಂದಾತನಯ್ಯಾ ನಮ್ಮ ಬಸವರಾಜನು-
ಬಯಲಗೊಂದು ರೂಪಮಾಡಿ ಬಣ್ಣಕ್ಕೆ ತಂದು, ಆ ಬಣ್ಣವ

ನಿಜದಲ್ಲಿ ನಿಲಿಸಿದಾತನಯ್ಯಾ ನಮ್ಮ ಬಸವರಾಜನು-
ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ
ಇಚ್ಛೆಯನರಿದು ಅರ್ಪಿತವ ಮಾಡಿದಾತನಯ್ಯಾ ನಮ್ಮ ಬಸವರಾಜನು.
ಅಂಗ ಸಂಗಿಗಳ ನಂತರಿಗೆ
ಅಂಗನೆಯರ ಅನುಭವವ ನಡೆಸಿದಾತನಯ್ಯಾ ನಮ್ಮ ಬಸವರಾಜನು
ಮೂವತ್ತಾರು ಸಾವಿರ ಮಾಹೇಶ್ವರರಿಗೆ ಮುಖ ಮೂರ್ತಿಯಾಗಿ
ಅರ್ಪಿತ ಪ್ರಸಾದವನನುಭವಿಸಿದಾತನಯ್ಯಾ ನಮ್ಮ ಬಸವರಾಜನು.
ಹನ್ನೆರಡು ಸಾವಿರ ರಾಣಿಯರ
ಅಂಗವನರ್ಪಿತ ಪ್ರಸಾದಿಗಳ ಮಾಡಿದಾತನಯ್ಯಾ ನಮ್ಮ ಬಸವರಾಜನು
ಎಂಬತ್ತೆಂಟು ಪವಾಡಮಂ ಗೆದ್ದು ಮುನ್ನೂರರುವತ್ತು ಸತ್ತ
ಪ್ರಾಣಿಯನೆತ್ತಿ ಮೆರೆದು, ಪರಸಮಯನಳಿದಾತನಯ್ಯಾ ನಮ್ಮ ಬಸವರಾಜನು
ಇಪ್ಪತ್ತೈದು ಸಾವಿರ ಚಾರ್ವಾಕರಂ ನೆಗಲೊತ್ತಿ,
ಅಪ್ರತಿಮ ಶಿವಗಣಂಗಳ ಮಹಾತ್ಮೆಯಂ
ಮೆರೆದಾತನಯ್ಯಾ ನಮ್ಮ ಬಸವರಾಜನು.
ಪ್ರಣವದ ಬೀಜವ ಬಿತ್ತಿ, ಪಂಚಾಕ್ಷರಿಯ ಬೆಳೆಯ ಬೆಳೆದು,
ಪರಮ ಪ್ರಸಾದವನೊಂದು ರೂಪವಮಾಡಿ ಮೆರೆದು,
ಭಕ್ತಿಫಲವನುಂಡಾತನಯ್ಯಾ ನಮ್ಮ ಬಸವರಾಜನು.
ಚನ್ನಬಸವನೆಂಬ ಪ್ರಸಾದಿಯ ಪಡೆದು,
"ಅನುಭವ ಮಂಟಪ" ವನನು ಮಾಡಿ
ಅನುಭವಮೂರ್ತಿಯಾದನಯ್ಯಾ ನಮ್ಮ ಬಸವರಾಜನು.
ಅರಿವ ಸಂಪಾದಿಸಿ ಆಚಾರವನಂಗಗೊಳಿಸಿ,
ಏಳುನೂರೆಪ್ಪತ್ತು ಗಣಂಗಳ
ಅನುಭವಮೂರ್ತಿಗಳ ಮಾಡಿದಾತನಯ್ಯಾ ನಮ್ಮ ಬಸವರಾಜನು.
ಆ ಅನುಭವದಲ್ಲಿ ಐಕ್ಯಪ್ರಸಾದವನಂಗಂಗೊಂಡು,
ಮಂತ್ರ ನಿರ್ಮಂತ್ರವಾದಾತನಯ್ಯಾ ನಮ್ಮ ಬಸವರಾಜನು.
ಭಕ್ತಿ ಸ್ಥಲವನಳಿದು ಭಾವವಡಗಿ ಬಟ್ಟ ಬಯಲ ಕೂಡಿ,
ಸಂಗಯ್ಯನಲ್ಲಿ ಸ್ವಯಲಿಂಗಿಯಾದನಯ್ಯಾ ನಮ್ಮ ಬಸವರಾಜನು.
ಈ ವಚನಾಮೃತ! ತ್ರಿಭುವನಕೀರ್ತಿ, ಭಕ್ತಿಮಹಿಮಾ ಪೂರ್ತಿ
ಸನ್ಮಂಗಳ ಮೂರ್ತಿ ಶ್ರೀ ಬಸವಣ್ಣನವರ ಪ್ರಿಯ ಧರ್ಮಪತ್ನಿ
ಮಹಾಪುಣ್ಯತಾಯಿ ಶ್ರೀ ನೀಲಮ್ಮನವರ ಮಹಾಲಿಂಗಯೋಗ!
ಧರ್ಮಾಮೃತ ! ಸವಿದು ಶಿವಾನಂದ ಸಾಮ್ರಾಜ್ಯವಡೆದು
ನಿತ್ಯ ಸುಖಿಸಬಾರಾ, ಶ್ರೀ ಶೈಲಮಲ್ಲಿಕಾರ್ಜುನ !"



ಶ್ರೀ ಅಕ್ಕನಾಗಮ್ಮನ ಸಂದೇಶ [256]

**ಅನುಭಾವ ಗಂಗೆ :** "ಆಚಾರವೆಂಬುದು ಅಗೋಚರ ನೋಡಯ್ಯಾ,
ಆರಿಗೆಯೂ ಸಾಧ್ಯವಲ್ಲವಯ್ಯಾ.
ಮರ್ತ್ಯಲೋಕದಲ್ಲಿ ಆ ಸದಾಚಾರದ ಬೆಳವಿಗೆಯ ಮಾಡಲೆಂದು
ಬಸವಣ್ಣ ಬಂದು ಭಕ್ತಿ ಸ್ಥಲವ ಹರಹಿದನಯ್ಯಾ
ಗುರುಲಿಂಗ ಜಂಗಮ ದಾಸೋಹಪಾದೋದಕ ಪ್ರಸಾದದ
ಹಾದಿಯನೆಲ್ಲರಿಗೆ ತೋರಿದನಯ್ಯಾ,
ಶಿವಾಚಾರದ ಬೆಳೆವಿಗೆಯ ಘನವನಹುದಲ್ಲವೆಂದು.
ಬಿಜ್ಜಳ ತರ್ಕಿಸಲು ಅನಂತ ಮುಖದಿಂದ
ಒಡಂಬಡಿಸಿ ಅಹುದೆನಿಸಿದಯ್ಯಾ,
ಬಂದ ಮಣಿಹ ಪೂರೈಸಿತ್ತೆಂದು ಲಿಂಗದೊಳಗೆ,
ಬಗಿದು ಹೊಕ್ಕಡೆ ಹಿಂದೆ ಲೋಕವರಿದು
ಬದುಕ ಬೇಕೆಂದು ಸೆರಗ ಕೊಟ್ಟನಯ್ಯಾ,
ನಾನು ಹಿಂದುಳಿದಹಳೆಂದು ಮುಂದಣಗತಿಯ ತೋರಿ
ಬಸವಣ್ಣಪ್ರಿಯ ಚನ್ನಸಂಗಯ್ಯನಲ್ಲಿ
ತನ್ನ ಪ್ರಸನ್ನದೊಳಗೆ ಇಂಬಿಟ್ಟುಕೊಂಡನಯ್ಯಾ
ಎನ್ನ ಹೆತ್ತ ತಂದೆ ಸಂಗನ ಬಸವಣ್ಣನು.
ಇದು ಶ್ರೀ ಅಕ್ಕನಾಗಮ್ಮನವರ
ಪರಮ ಅನುಭಾವ ಪೂರಿತ
ದಿವ್ಯ ಸಂದೇಶಾಮೃತ !
ಸವಿಯ ಬಾರಾ ಧರ್ಮಸಿಂಧು !
ಲೋಕೈಕ ಆತ್ಮಪ್ರಿಯ ಬಂಧು !
ಕರುಣಾ ಸಿಂಧು ! ಶ್ರೀ ಶೈಲ ಮಲ್ಲಿಕಾರ್ಜುನ !

ಶ್ರೀಗಂಗಾಂಬಿಕೆಯ ಸಂದೇಶ [257]

**ಆನಂದ ಭಕ್ತಿಗಂಗೆ :** "ಇದೇನೊ, ಮೀರಿ ತೋರುವ ಮೂರುತಿ
ಪುಷ್ಪಗುಂಪಿನಲ್ಲಿ ಕಾಣದೆ ಹೋಗಿದೆ ನೋಡಾ !
ಇದೇನೊ, ಮೀರಿ ತೋರುವ ಮೂರುತಿ
ಕರಕಮಲದಲ್ಲಿಯ ಲಿಂಗದಂತೆ
ಉಲಹದ ಸ್ಥಿತಿ ತೋರುತ್ತದೆ ನೋಡಾ !
ಇಂತಪ್ಪ ಮೂರ್ತಿಯ ಕಂಡು
ಗಂಗಾಪ್ರಿಯ ಕೂಡಲ ಸಂಗನ ಶರಣನ
ಸತೀಮಣಿ ಧನ್ಯಳಾದಳು ಕೇಳಾ ಚನ್ನಬಸವಣ್ಣಾ
ಈ ವಚನಾಮೃತ, ಶ್ರೀ ಬಸವೇಶ್ವರರ
ಪುಣ್ಯಾಂಗನೆ ಶ್ರೀ ಗಂಗಾಂಬಿಕೆಯ

ದಿವ್ಯ ಸಂದೇಶಾಮೃತ ! ಪಾನ ಮಾಡ ಬಾರಾ
ಶ್ರೀ ಶೈಲ ಮಲ್ಲಿಕಾರ್ಜುನ ! ”

**ದೇವರಾಜ್ಯ [258]**

“ಭಾರತದಿ ನಡೆದ ದುಷ್ಟಶಕ್ತಿಯ ಚೆಲ್ಲಾಟ ನೋಡಾ.
ಕ್ರೂರ ಆಶಾಪಾಶದೊಳು ನಿಂದ ಕುಟಿಲ ಮನುಜರಿಂದು
ಕರ್ಮವನು ಬೆಳೆಸಿಯಾರು, ಧರ್ಮವನು ಬಿಟ್ಟಾರು
ಮರ್ಮವನು ಹಿಡಿದಾರು, ಮರ್ಮವನು ಜಡಿದಾರು
ಆಡಂಬರ ನಡಿಸಿಯಾರು, ಡೊಂಬರಾಟ ಮಾಡಿಯಾರು
ಜೇಡರೆಲ್ಲ ಕೂಡಿಯಾರು, ಹಿಡಿಂಬ ರಾಜ್ಯಗೆಯ್ದಾರು
ಬಡತನದ ಬೀಜ ತಂದಾರು, ಭಾರತದಿ ಬಿತ್ತಿಯಾರು
ಕಡುವೈರಿ ಆದಾರು ದುರ್ಧನಿಕರು ಬೆಂಕಿ ಹಚ್ಚಿಯಾರು
ಅಸತ್ಯವನು ಮೆರೆದಾರು ಸತ್ಯವನು ಜರಿದಾರು
ರಕ್ತಹೊಳೆ ಹರಿದೀತು ಜಗವೆದ್ದು ಉರಿದೀತು
ಸ್ವಾಮಿಗಳು ಕಾಮಿಗಳಾದರು ಮಠದಿ ತೊಟ್ಟಿಲ ಕಟ್ಟಿಯಾರು
ಭೂಕಾಂತೆ ನಡುಗಿಯಾಳು ಭಾನುತೇಜ ಮರೆಯಾದೀತು
ಚನ್ನಬಸವಣ್ಣ ಬರುವಾಗ ಇನಿತೆಲ್ಲ ಕೇಡುಗಳಾಗವು
ಶರಣರಾ ಹರಣ ಹಿರಿದಾಗಿ ಉಳಿವೆಯೊಡೆಯ ಬಂದಾನು
ಹರದಾಳಿ ಎದ್ದೀತು ದುಷ್ಟಶಕ್ತಿಯ ಆಟ್ಟ ಬಿದ್ದೀತು
ಏಳು ನೂರೆಪ್ಪತ್ತು ಅಮರಗಣಂಗಳೊಡವೆರೆದೈತಂದ ಚನ್ನಬಸವಣ್ಣ
ಕೈಲಾಸ ತಂದಾನು ಧರೆಯಮೇಲೆ “ದೇವರಾಜ್ಯ” ನಡಸಿಯಾನು ನೋಡಾ!
ಶ್ರೀ ಶೈಲ ಮಲ್ಲಿಕಾರ್ಜುನ !”

“ಕಲಾರಸಿಕ ಜನ ಮನೋಲ್ಲಾಸಂ ಕವಿ ಕೋಕಿಲಗಾನರಸಂ |
ಶರಣಗಣ ಹೃತ್ಕಮಲವಾಸಂ “ಕನ್ನಡ ಕವಿ ಕಾಳಿದಾಸಂ ||
ಬಸವ ಭಕ್ತಿ ತುಂಬಿ ತುಳುಂಕೆ ವಿರಚಿಸಿದಂ “ಬಸವತತ್ವರತ್ನಾಕರಂ”
ವಚನಾಮೃತ ಕೃತಿ ರತ್ನ ಪ್ರಭಾಕರಂ ಸಂಪೂರ್ಣ ಶುಭಕರಂ||”

ಎರಡು ನೂರಾ ಐವತ್ತೆಂಟು ವಚನಗಳೊಂದಿಗೆ
“ಬಸವ ತತ್ವ ರತ್ನಾಕರ”
ವಚನಾಮೃತ ಕೃತಿರತ್ನ
ಪ್ರಭಾಕರವಿದು ಸಂಪೂರ್ಣ
ಶುಭವನ್ನುಂಟು ಮಾಡುವುದಾಗಿ
ಸಂಪೂರ್ಣಮಾದುದು.
ಮಂಗಳಮಸ್ತು !

–ಶ್ರೀ ಮೊಟಗಿ ಮಲ್ಲಿಕಾರ್ಜುನ “ ಕನ್ನಡ ಕವಿಕಾಳಿದಾಸ ” ಅಥಣಿ–591304 (ಬೆಳಗಾವಿ ಜಿಲ್ಲೆ)

## ಸಮೃದ್ಧ ಸ್ವಾಭಿಮಾನಿ ಸದೃಢ “ಕರ್ನಾಟಕ” ನಿರ್ಮಾಣದತ್ತ ಮೊದಲ ಹೆಜ್ಜೆಗಳು

**ರಾಜ್ಯದಲ್ಲಿ ಪರಿವರ್ತನೆಯ ಹೊಸಗಾಳಿ : ಹೊಸದೃಷ್ಟಿ, ಹೊಸ ದಾರಿಯ ಅನ್ವೇಷಣೆಯಲ್ಲಿ ಶ್ರೀ ಹೆಚ್. ಡಿ. ದೇವೇಗೌಡರ ನೇತೃತ್ವದಲ್ಲಿ ಜನತೆಯ ಆಶೋತ್ತರಗಳಿಗೆ ಸ್ಪಂದಿಸುವ ಹೊಸ ಆಡಳಿತ.**

**‘ಜನತಾದರ್ಶನ’** : ಜನತೆಯ ಕುಂದು ಕೊರತೆಗಳಿಗೆ ಮುಖ್ಯಮಂತ್ರಿ ಗಳಿಂದಲೇ ನೇರಸ್ಪಂದನ. ಜನರಿಂದ ಅಹವಾಲುಗಳ ನೇರ ಸ್ವೀಕಾರ-ತ್ವರಿತ ಪರಿಹಾರ. ಇದಕ್ಕಾಗಿ ಮುಖ್ಯಮಂತ್ರಿಗಳ ಕಾರ್ಯಾಲಯದಲ್ಲಿ ಕಾರ್ಯದರ್ಶಿ ಮಟ್ಟದ ಅಧಿಕಾರಿ ನೇತೃತ್ವದಲ್ಲಿ ವಿಶೇಷಘಟಕ. ಆಡಳಿತದ ವಿವಿಧ ಹಂತಗಳಲ್ಲೂ ಈ ವ್ಯವಸ್ಥೆಯ ವಿಸ್ತರಣೆ. ಜಿಲ್ಲಾಧಿಕಾರಿಗಳಿಂದ ಕಡ್ಡಾಯ ಜನಸಂಪರ್ಕ ಸಭೆ.

**ಸ್ವಚ್ಛ ದಕ್ಷ ಆಡಳಿತ :** ಭ್ರಷ್ಟಾಚಾರ ರಹಿತ, ದಕ್ಷ ಆಡಳಿತ, ಸರ್ಕಾರದ ಗುರಿ. ಲೋಕಾಯುಕ್ತ ಬಲವರ್ಧನೆ. ಸರ್ಕಾರಿ ನೌಕರರ ವಿರುದ್ಧ ಬರುವ ದೂರುಗಳ ಪರಿಶೀಲನೆಗೆ ಮುಖ್ಯಮಂತ್ರಿಗಳ ಕಛೇರಿಯಲ್ಲಿ ಜಾಗೃತ ಘಟಕ. ಅಭಿವೃದ್ಧಿ ಕಾರ್ಯಕ್ರಮಗಳ ತ್ವರಿತ ಅನುಷ್ಠಾನ ಮತ್ತು ಆಡಳಿತದ ಚುರುಕಿಗೆ ಮುಖ್ಯಮಂತ್ರಿಗಳು, ಸಚಿವರು ಹಾಗೂ ಉನ್ನತ ಅಧಿಕಾರಿಗಳಿಂದ ಅನಿರೀಕ್ಷಿತ ಭೇಟಿ-ತಪಾಸಣೆ.

**ಅನ್ನ ನೀರು ಸೂರು :** ಕುಡಿಯುವ ನೀರು ಪೂರೈಕೆಗೆ ಆದ್ಯತೆ. ಶೀಘ್ರದಲ್ಲೇ 30ಕೋಟಿ ರೂ ಬಿಡುಗಡೆ. ಗ್ರಾಮೀಣ ಪ್ರದೇಶದಲ್ಲಿ ನಿವೇಶನ ರಹಿತ ಬಡಕುಟುಂಬಕ್ಕೆ ಸೂರು ಒದಗಿಸಲು ಸರ್ಕಾರದ ದಿಟ್ಟ ನಿರ್ಧಾರ. ಅರ್ಹ ಫಲಾನುಭವಿಗಳ ಆಯ್ಕೆಗಾಗಿ ವಿಶೇಷ ಸಮೀಕ್ಷೆ. ಹಸಿರು ಪಡಿತರ ಚೀಟಿ ಹೊಂದಿರುವ ಬಡಜನರಿಗೆ ಮುಂದಿನ ಏಪ್ರಿಲ್‌ನಿಂದ 1. ಕೆ.ಜಿ.ಗೆ. 3-20ರ ದರದಲ್ಲಿ ಅಕ್ಕಿ ಪೂರೈಕೆ.

**ಜನತೆಗೆ ಅಧಿಕಾರ:** ಹೊಸ ಸರ್ಕಾರ ರಚನೆಗೆ ತೋರಿರುವ ಒಲವಿಗೆ ಪ್ರತಿ-ಯಾಗಿ ಜನತೆಗೆ ಅಧಿಕಾರ. "ಪಂಚಾಯತ್ ರಾಜ್ ವ್ಯವಸ್ಥೆಯ ಬಲವರ್ಧನೆ". ಮಾರ್ಚ್ ತಿಂಗಳಿನಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತ್ ಚುನಾವಣೆ. ಶಾಸನ ಸಭೆಯಲ್ಲಿಯೂ ಮಹಿಳೆಯರಿಗೆ ಶೇಕಡ 30ರಷ್ಟು ಸ್ಥಾನ ಮೀಸಲಿಡಲು ಕ್ರಾಂತಿಕಾರಿ ಆಲೋಚನೆ.

**ವಿದ್ಯುತ್ ನೀರಾವರಿ:** ಕೃಷ್ಣ-ಕಾವೇರಿ ಕಣಿವೆಗಳ ಯೋಜನೆಗಳನ್ನು ಸಕಾಲದಲ್ಲಿ ಪೂರ್ಣಗೊಳಿಸಲು ಕಾಲಬದ್ಧ ಕಾರ್ಯಕ್ರಮ. ವಿದ್ಯುತ್ ಕೊರತೆ ನಿವಾರಣೆಗೆ ಖಾಸಗಿ ಹಾಗೂ ವಿದೇಶಿ ಬಂಡವಾಳ ಹೂಡಿಕೆಗೆ ಪ್ರೋತ್ಸಾಹ. ವಿದ್ಯುತ್ ವಿತರಣೆಯಲ್ಲಿ ಆಗುತ್ತಿರುವ ಸೋರಿಕೆ ತಡೆಗಟ್ಟಲು ವಿಶೇಷಯೋಜನೆ.

**ರೈತರಿಗೆ ನೆರವು:** ರೈತರು ಪಡೆದ ಸಹಕಾರಿ ವಲಯದ ಸಾಲದ ಮೇಲಿನ ಬಡ್ಡಿ ಮತ್ತು ಸುಸ್ತಿ ಬಡ್ಡಿ ಮನ್ನಾ. ಆಸ್ತಿ ಒಡೆತನದ ಖಾತೆ ಬದಲಾವಣೆ ಮುಂತಾದ ರೈತ ಸಂಬಂಧಿತ ಕೆಲಸ ಕಾರ್ಯಗಳಲ್ಲಿ ಆಗುತ್ತಿದ್ದ ವಿಳಂಬಕ್ಕೆ "ಇತಿಶ್ರೀ".

**ನಾಳಿನ ಒಳಿತಿಗಾಗಿ:** ಸಿಂಗಾಪೂರ್ ಸರ್ಕಾರದ ಸಹಯೋಗ ದೊಂದಿಗೆ ಬೆಂಗಳೂರಿನಲ್ಲಿ "ಇನ್‌ಫರ್‌ಮೇಷನ್ ಟೆಕ್ನೋಲಜಿಪಾರ್ಕ್", ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಮತ್ತು ತೀವ್ರಗತಿಯಿಂದ ಬೆಳೆಯುತ್ತಿರುವ ಬೆಂಗಳೂರು ನಗರದ ಸಾರಿಗೆ ವ್ಯವಸ್ಥೆಯನ್ನು ಸುಧಾರಿಸಲು "ತ್ವರಿತ ಸಮೂಹ ಸಾರಿಗೆ ವ್ಯವಸ್ಥೆಗೆ ಮಂಜೂರಾತಿ.

**ನುಡಿದಂತೆ ನಡೆಯುವ ಸರ್ಕಾರ**

**ಗಣರಾಜ್ಯೋತ್ಸವದ ಶುಭಾಶಯಗಳು**

**ಕರ್ನಾಟಕ ವಾರ್ತೆ**

# ಸಾಮಾನ್ಯ ಜ್ಞಾನ ಮಂಜರಿ-1

1 ಕನ್ನಡದಲ್ಲಿ "ವೈದ್ಯಪದ ಕೋಶ" ವನ್ನು ರಚಿಸಿದವರು ಯಾರು ?
2 'ಪುಲಿಟ್ಜರ್' ಪ್ರಶಸ್ತಿ ಯಾವ ಕ್ಷೇತ್ರಕ್ಕೆ ಮೀಸಲಾಗಿದೆ ?
3 'ದಿ ಗಿನ್ನೆಸ್ ಬುಕ್ ಆಫ್ ರೆಕಾರ್ಡ್ಸ್' ಎಷ್ಟು ಭಾಷೆಗಳಲ್ಲಿ ಪ್ರಕಟವಾಗುತ್ತದೆ ?
4 'ಮದರ್ ತೆರೇಸಾ' ಅವರ ನಿಜನಾಮಧೇಯ ಏನು ?
5 ಭಾರತದಲ್ಲಿ ಪ್ರಪ್ರಥಮವಾಗಿ ತರೆಯಲಾದ ಬಾನುಲಿ ಪ್ರಸಾರ ಕೇಂದ್ರ ಯಾವುದು ?
6 'ಪ್ರೈಡ್ ಆ್ಯಂಡ್ ಪ್ರೆಜುಡಿಸ್' ಎಂಬ ಪ್ರಸಿದ್ಧ ಕಾದಂಬರಿಯನ್ನು ಬರೆದವರು ಯಾರು ?
7 ವಿಶ್ವದಲ್ಲಿಯೇ ಅತಿ ಉದ್ದ ರೈಲ್ವೆ ಪ್ಲಾಟ್ ಫಾರಂ ಹೊಂದಿದ ರೈಲು ನಿಲ್ದಾಣ ಯಾವುದು ?
8 ವಿಶ್ವದಲ್ಲಿಯೇ ಅತ್ಯಂತ ದೊಡ್ಡ ಬಂದರು ಯಾವುದು ?
9 ಹೋಂರೂಲ್ ಚಳುವಳಿ ಆರಂಭಿಸಿದವರು ಯಾರು ? ಯಾವಾಗ ?
10 15 ನೇ ವಯಸ್ಸಿಗೆ ವಿಂಬಲ್ಡನ್ ಟೆನ್ನಿಸ್ ಚಾಂಪಿಯನ್ ಪದವಿ ಪಡೆದವರಾರು?
11 ದೆಹಲಿಯ ಕೆಂಪು ಕೋಟೆಯನ್ನು ಕಟ್ಟಿಸಿದ ಮೊಘಲ್ ದೊರೆ ಯಾರು ?
12 ಅತ್ಯಂತ ಹಗುರವಾದ ಲೋಹ ಯಾವುದು ?
13 ಹಾಲಿನ ಶುದ್ಧತೆಯನ್ನು ತಿಳಿಯಲು ಬಳಸುವ ಉಪಕರಣ ಯಾವುದು ?
14 ಗಾಂಧೀಜಿಯವರನ್ನು ರಾಷ್ಟ್ರಪಿತ ಎಂದು ಕರೆದವರು ಯಾರು ?
15 ಜವಾಹರಲಾಲ್ ನೆಹರು ಅವರ ತಾಯಿಯ ಹೆಸರೇನು ?
16 'ಸ್ಲೈಡ್‌ರೂಲ್'ನ ಜನಕ ಯಾರು ?

**ಉತ್ತರಗಳು :–**

1. ಡಾ. ಡಿ.ಎಸ್. ಶಿವಪ್ಪ
2. ಪತ್ರಿಕೋದ್ಯಮ
3. 35 ಭಾಷೆಗಳಲ್ಲಿ
4. ಆಗ್ನೆಸ್ ಗೋಂಖಾ ಜೊಜಾಕ್ಸಿಯು
5. ಮುಂಬಯಿ
6. ಜಾನ್ಸ್ ಆಸ್ಟಿನ್
7. ಪಶ್ಚಿಮ ಬಂಗಾಲದ ಖರಗಪುರ
8. ರೋಟರ್ ಡಾಂ (ಹಾಲಂಡ್)
9. ಅನಿಬೆಸೆಂಟ, 1916
10. ಮಿಸ್ ಚಾರ್ಲೋಟ್ ಡಾಡ್(1887)
11. ಶಹಜಹಾನ್
12. ಲೀಥಿಯಮ್
13. ಲ್ಯಾಕ್ಟೋಮಿಟರ್
14. ಸುಭಾಸ್ ಚಂದ್ರ ಬೋಸ್
15. ಸ್ವರೂಪರಾಣಿ
16. ವಿಲಿಯಂ ಔಟ್ ಟ್ರೆಡ್.

ಶಂಕರಗೌಡ. ವೈ. ಪಾಟೀಲ, ಚಾಲುಕ್ಯ ನಗರ 5 ನೇ ಕ್ರಾಸ್,
ಅಂಬಾದಾಮಿ–587 201, ಜಿಲ್ಲೆ ಬಿಜಾಪೂರ, [ಕರ್ನಾಟಕ].

## ಸಿದ್ಧಗಂಗಾ ಪಾಕೇಟ್ ಕ್ಯಾಲೆಂಡರ್

| ಜನವರಿ ಆಕ್ಟೋಬರ್ | ಮೇ | ಆಗಸ್ಟ್ | ಫೆಬ್ರವರಿ ಮಾರ್ಚಿ ನವಂಬರ್ | ಜೂನ್ | ಸೆಪ್ಟೆಂಬರ್ ಡಿಸೆಂಬರ್ | ಏಪ್ರಿಲ್ ಜುಲೈ | 1995 | | | | |
|---|---|---|---|---|---|---|---|---|---|---|---|
| ರವಿವಾರ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | 1 | 8 | 15 | 22 | 29 |
| ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ರವಿವಾರ | 2 | 9 | 16 | 23 | 30 |
| ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ರವಿವಾರ | ಸೋಮವಾರ | 3 | 10 | 17 | 24 | 31 |
| ಬುಧವಾರ | ಗುರುವಾರ | ಶುಕ್ರವಾರ | ಶನಿವಾಸ | ರವಿವಾರ | ಸೋಮವಾರ | ಮಂಗಳವಾರ | 4 | 11 | 18 | 25 | ❋ |
| ಗುರುವಾರ | ಶುಕ್ರವಾರ | ಶನಿವಾರ | ರವಿವಾರ | ಸೋಮವಾರ | ಮಂಗಳವಾರ | ಬುಧವಾರ | 5 | 12 | 19 | 26 | ❋ |
| ಶುಕ್ರವಾರ | ಶನಿವಾರ | ರವಿವಾರ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | 6 | 13 | 20 | 27 | ❋ |
| ಶನಿವಾರ | ರವಿವಾರ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | 7 | 14 | 21 | 28 | ❋ |

**ರಚನೆ : ಶಂಕರಗೌಡ ವೈ. ಪಾಟೀಲ,**
ಚಾಲುಕ್ಯ ನಗರ, 5 ನೇ ಕ್ರಾಸ್, ಬಾದಾಮಿ,
ಬಿಜಾಪುರ ಜಿಲ್ಲೆ.

ಸ್ಥಾಪನೆ : 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285 }
ಸಿ.ಎಸ್.ಟಿ. 73656288 } ದಿ 24-8-62

ಕೇಂದ್ರ ಕಛೇರಿ : { 72866 / 70204

ಮಿನಿ ಬಜಾರ್: 351114

## ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.

ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ :

| | |
|---|---|
| ಸದಸ್ಯರಿಂದ | ರೂ. 7.08 ಲಕ್ಷ |
| ಸರ್ಕಾರದಿಂದ | ರೂ. 13-42 ಲಕ್ಷ |
| ಒಟ್ಟು | ರೂ. 20.50 ಲಕ್ಷ |

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು

–: ನಿರ್ದೇಶಕರು :–

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶೀ ವೈ. ಟಿ. ಮಹದೇವಪ್ಪನವರು
5) ಶೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
ಉಪನಿಬಧಂಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು

ಭಾರತೀಯ ರಿಸರ್ವ ಬ್ಯಾಂಕ್ ಲೈಸನ್ಸ್ ಪುರಸ್ಕೃತ

## ತುಮಕೂರು ಧಾನ್ಯ ವರ್ತಕರ ಸಹಕಾರ ಬ್ಯಾಂಕ್ ನಿಯಮಿತ

ಪ್ರಧಾನ ಕಛೇರಿ : ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು-572 101

ಶಾಖೆ : ಸೋಮೇಶ್ವರ ಪುರಂ, ಬಿ.ಹೆಚ್. ರಸ್ತೆ, ತುಮಕೂರು-572 102

ನಿಶ್ಚಿತ ಠೇವಣಿ

**ಅಲ್ಪಾವಧಿಯ ಠೇವಣಿ ಬಡ್ಡಿ ಗಮನಾರ್ಹವಾಗಿ ವರ್ಧಿಸಿದೆ**

| | |
|---|---|
| 46 ದಿವಸಗಳಿಂದ 180 ದಿವಸಗಳವರೆಗೆ | ಶೇ 10.50 |
| 181 ದಿವಸಗಳಿಂದ 364 ದಿವಸಗಳವರೆಗೆ | ಶೇ 10.25 |
| 365 ದಿವಸಗಳಿಗೆ ಮೇಲ್ಪಟ್ಟು | ಶೇ 10.50 |
| ಉಳಿತಾಯ ಖಾತೆ | ಶೇಕಡ 6 |

**ಮಂಗಳ ನಗದು ಪತ್ರದ ಸರ್ಟಿಫಿಕೇಟ್** 7 ವರ್ಷಗಳಲ್ಲಿ ನೀವು ಹೂಡಿದಹಣ ದ್ವಿಗುಣ

ಪ್ರತಿಯೊಬ್ಬ ಠೇವಣಿದಾರರು ಹೂಡುವ 1, 00,000-00 ರೂ ಗಳವರೆಗೆ ವಿಮಾ ರಕ್ಷಣೆ ಇರುತ್ತದೆ.

ಎಲ್ಲಾ ವಾಣಿಜ್ಯ ಬ್ಯಾಂಕುಗಳಿಗಿಂತ ಠೇವಣಿಗಳ ಮೇಲೆ ಶೇಕಡ 0.5 ರಿಂದ ಶೇಕಡ 1 ರಂತೆ ಹೆಚ್ಚಿನ ಬಡ್ಡಿ.

ಆರ್. ಜಿ. ಅನಂತರಾಜಯ್ಯ,
ಅಧ್ಯಕ್ಷರು.

ಡಿ. ರುದ್ರಯ್ಯ,
ಕಾರ್ಯನಿರ್ವಾಹಕ ನಿರ್ದೇಶಕರು.

ಫೋನ್ : { 78064 / 78923

## ಸಿ. ಪಿ. ಮೃತ್ಯುಂಜಯ

ಮಂಡಿಪೇಟೆ, ತುಮಕೂರು...572 101.

ತುಮಕೂರು ಐರನ್ ಅಂಡ್ ಪೈಂಟ್ಸ್, ಡಿಪೋ

ಪೈಪು, ಬಣ್ಣ, ಮತ್ತು ಕಬ್ಬಿಣದ ಸಾಮಾನುಗಳ ಮಾರಾಟಗಾರರು

Phone : 72564

Sister Concern :

**SURI & SACHI ENTERPRISES**

Sanitary Pipes, and Paint Merchants.

MANDIPET, TUMKUR-572 101.

## ಕ್ಷೇತ್ರ ವಾರ್ತೆ

–ಹೆಚ್.ಬಿ. ಗಂಗಾಧರಯ್ಯ

## ಕವಿ ಸ್ಮೃತಿ ಸಮಾರಂಭ

14-1-95 ಶನಿವಾರ ಪೂಜ್ಯ ಶ್ರೀ ಶ್ರೀಗಳವರ ಸಾನಿಧ್ಯದಲ್ಲಿ ಶ್ರೀ ಮಠದಲ್ಲಿ ಕವಿಸ್ಮೃತಿ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ಡಾ. ಸಾ. ಶಿ. ಮರುಳಯ್ಯನವರು **ಡಾ. ಸಿದ್ಧಯ್ಯಪುರಾಣಿಕರಿಗೆ** ಶ್ರದ್ಧಾಂಜಲಿ ಅರ್ಪಿಸಿ ಮಾತನಾಡಿದರು. ಮಾನವಜೀವನ ಸುಖದುಃಖ, ನೋವು ನಲಿವು ಬೇವು ಬೆಲ್ಲಗಳ ಸಂಮಿಶ್ರಣ. ಇದನ್ನು ಸಂಪೂರ್ಣವಾಗಿ ಅರಿತು ವಚನೋದ್ಯಾನ ಮತ್ತು ವಚನವಂದನದಂಥಹ ಮೇರು ಕೃತಿಗಳನ್ನು ಪುರಾಣಿಕರು ರಚಿಸಿದರು. 20ನೇ ಶತಮಾನದ ಯುವ ಪ್ರವರ್ತಕರು, 1982 ರಲ್ಲಿ ಭಿಲ್ವಾರ್ ಪ್ರಶಸ್ತಿ ಲಭಿಸಿತು. ಸಾತ್ವಿಕ ಸ್ವಭಾವ ಹೊಂದಿ ಸಮತೋಲನ ಉಳಿಸಿ ಕೊಂಡು ಬಂದವರು.

"ಓದಿ ಬ್ರಾಹ್ಮಣನಾಗು." "ನೀ ಏನಾದರೂ ಆಗು ಮೊದಲು ಮಾನವನಾಗು"ಈ ಮಾತು
ಗಳುಆತ್ಮವಿಶ್ವಾಸ ಮತ್ತು ಮಾನವೀಯತೆಯನ್ನು ಜನಮನದಲ್ಲಿ ವಿಜೃಂಭಿಸುವಂತೆ
ಮಾಡುತ್ತವೆ. ಹುಟ್ಟು ಆಕಸ್ಮಿಕ. ಸಾವು ಅನಿವಾರ್ಯ.ಜೀವ ಸಾವಿನ ಕೊಡುಗೆ,
ಬದುಕಿಗೆಪೂರ್ಣತೆ. ಸಾವು. ಹುಟ್ಟು ಸಾವಿನ ಬಗ್ಗೆ ಬದುಕು ಶ್ರೇಷ್ಠ. ಬದುಕಿಸು ಸುವರ್ಣ
ತತ್ವ, ತಾನು ಬುದುಕಿ ಎಲ್ಲವನ್ನೂ ಬದುಕಿಸಬೇಕು. ಮಾನವ ಹುಟ್ಟು ತಡೆಯಬ
ಹುದು.ಸಾವನ್ನು ಗೆಲ್ಲಲುಸಾಧ್ಯವಿಲ. ಸಾವು ಶತಸಿದ್ಧ. ಸವಿ ಹೆಚ್ಚಿಸುವಬದುಕು ಬಾಳ
ಬೇಕು. ಇವು ಅವರ ಅನಿಸಿಕೆಗಳು. ಪುರಾಣಿಕರು ಮಾನವ ಜೀವನಕ್ಕೆ ಸ್ಪಂದಿಸುವ 45
ಕೃತಿಗಳನ್ನು ರಚಿಸಿ ಆಮರರಾಗಿದ್ದಾರೆ. ಅವರು ಜ್ಯೋತಿ ಸ್ವರೂಪರು, ಅವರ ನೆನಪು
ಕರ್ನಾಟಕದಲ್ಲಿ ಎಲ್ಲಾ ಕಾಲಕ್ಕೂ ಉಳಿಯುತ್ತದೆ ಎಂದು ಹೇಳಿದರು.

**ಡಾ. ತಿಪ್ಪೇರುದ್ರಸ್ವಾಮಿಗಳಿಗೆ**
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಇವರು ಬೆಳಕಿನಂತೆ ಬದುಕಿದ್ದರು ಎಂದರು. ಬಡತನದ ಕುಟುಂ
ಶ್ರದ್ಧಾಂಜಲಿ ಅರ್ಪಿಸಿ ಆವರ ಸಾಧನೆ-ಸಿದ್ಧಿ ಅತಿ ದೊಡ್ಡದಾಗಿತ್ತು. ಎಲ್ಲಾ ಪರೀಕ್ಷೆಗಳಲ್ಲಿ
ಬದಿಂದ ಬಂದರೂ, ಶ್ರೀ ಕುವೆಂಪು ಇವರನ್ನು ಗುರ್ತಿಸಿದರು. 40ನೇ ವಯ
ಉನ್ನತ ಶ್ರೇಣಿಯಲ್ಲಿ ತೇರ್ಗಡೆ. ಪ್ರಶಸ್ತಿ ಲಭಿಸಿತು. ಇವರನ್ನು "ಅಭಿನವ ಹರಿಹರ" ಎಂದು
ಸ್ಸಿನಲ್ಲಿ ಕೇಂದ್ರ ಅಕಾಡೆಮಿ ಬಗ್ಗೆ ಅಲ್ಲಮನನ್ನು ಕುರಿತು ಪರಿಪೂರ್ಣದೆಡೆಗೆ,
ಹೇಳಬಹುದು. ಶರಣರ ಜೀವನದ ಕರ್ಪೂರ, ಬಸವಣ್ಣನನ್ನು ಕುರಿತು ಕರ್ತಾರನ
ಅಕ್ಕಮಹಾದೇವಿ ಕುರಿತು ಕದಳಿ ನೆರಳಿನಿಂದಾಚೆಗೆ ಷಣ್ಮುಖಸ್ವಾಮಿ ಕುರಿತು ಜಡ
ಕಮ್ಮಟ, ಸಿದ್ಧರಾಮನನ್ನು ಕುರಿತು ರಚಿಸಿದ್ದಾರೆ.
ದಲ್ಲಿ ಜಂಗಮ ಎಂಬ ಗ್ರಂಥಗಳನ್ನು

ಕಲ್ಲಿನಿಂದ ಮಠವಾಗುವುದಿಲ್ಲ, ಹೃದಯದಿಂದ ಆಗಬೇಕು. ಹಣ್ಣಿರುವ ಗಿಡಕ್ಕೆ ಕಲ್ಲು ಹೊಡೆಯುತ್ತಾರೆ. ಹಣ್ಣಿಲ್ಲದ ಮರಕ್ಕೆ ಹೊಡೆಯುವುದಿಲ್ಲ. ಅವರಲ್ಲಿ ವಿಶೇಷವಾದ ಮಾನವೀಯತೆ ಇತ್ತು. ಅದ್ಭುತವಾದ ಶರಣ ಸಾಹಿತ್ಯ, ಅಧ್ಯಾಪಕ ಕ್ಷೇತ್ರಕ್ಕೆ ಆದರ್ಶ ವಾಗಿದ್ದರು. ಶ್ರೇಷ್ಠವಾಗ್ಮಿಗಳು. ಕೊನೆಯ ದಿನಗಳಲ್ಲಿ ನಗುತ್ತಾ ಇದ್ದರು. ಅವರ ಕನಸು ವ್ಯಕ್ತಿತ್ವ ಅವರ ಕೃತಿಗಳಲ್ಲಿದೆ. ಅವನ್ನು ತೆರೆದಾಗ ನಮಗೆ ಸದಾಕಾಲ ಸಿಗುತ್ತದೆ.

**ಶ್ರೀ ಶ್ರೀ ಗಳವರಿಂದ ಆಶೀರ್ವಚನ :–**

1994ನೇ ವರ್ಷ ಕರಾಳ ಸಂವತ್ಸರ, ಸಾಹಿತ್ಯ ಜಗತ್ತಿನ ಮಹಾನ್ ವ್ಯಕ್ತಿಗಳಾದ ಕುವೆಂಪು, ಶ್ರೀ ಸಿದ್ಧಯ್ಯಪುರಾಣಿಕರು ಮತ್ತು ಶ್ರೀ ತಿಪ್ಪೇರುದ್ರಸ್ವಾಮಿಗಳು ದಿವಂಗತ ರಾಗಿದ್ದಾರೆ: ಇವರು ನಿರ್ವಾಣವಾಗಿದ್ದರೂ ಅವರ ವ್ಯಕ್ತಿತ್ವ, ಸೇವೆ, ಸಾಧನೆ ಜನತೆ ಯನ್ನು ಸದಾ ಎಚ್ಚರಗೊಳಿಸಿ ಸನ್ಮಾರ್ಗದಲ್ಲಿ ನಡೆಯುವಂತೆ ಪ್ರಭಾವ ಬೀರುತ್ತದೆ. ಡಾ. ಸಿದ್ದಯ್ಯ ಪುರಾಣಿಕರು ಉರ್ದು, ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯಗಳಿ-ಸಿದ್ದರಲ್ಲದೆ ದಕ್ಷ ಆಡಳಿತಗಾರರಾಗಿ ಜನಪ್ರಿಯರಾಗಿದ್ದರು. ಡಾ. ತಿಪ್ಪೇರುದ್ರಸ್ವಾಮಿ-ಗಳು ಹೃದಯವಂತಿಕೆ ಉಳ್ಳವರು, ಶ್ರೇಷ್ಠ ಸಾಹಿತಿಗಳು ಮತ್ತು ಉತ್ತಮ ಅಧ್ಯಾಪಕ ರಾಗಿದ್ದರು. ಶ್ರೀ ಮಠದ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಇಬ್ಬರೂ ಶರಣಸಾಹಿತ್ಯದ ಅಪಾರ ಸಂಪತ್ತು ಬಿಟ್ಟು ಹೋಗಿದ್ದಾರೆ. ಅಧ್ಯ-ಯನ ಮಾಡಿ ಜೀವನ ಸಾರ್ಥಕ ಪಡಿಸಿಕೊಳ್ಳಬೇಕು.

ಪ್ರಾರಂಭದಲ್ಲಿ ಶ್ರೀ ಹೆಚ್. ವಿ. ವೀರಭದ್ರಯ್ಯ ಸ್ವಾಗತ ಕೋರಿದರು, ಶ್ರೀ ಪಿ. ಎನ್. ಚಂದ್ರಶೇಖರಯ್ಯನವರು ವಂದನೆ ಸಲ್ಲಿಸಿದರು.

## 54ನೇ ಉದ್ದಾನೇಶ್ವರ ಸ್ವಾಮಿಗಳವರ ಪುಣ್ಯಾರಾಧನೆ

15-1-1995ರ ಭಾನುವಾರ ಶ್ರೀ ಮಠದ ಮಹಾಚೈತನ್ಯ ಮೂರ್ತಿ ಉದ್ದಾನೇಶ್ವರರ 54ನೇ ಪುಣ್ಯಾರಾಧನೆಯನ್ನು ಭಕ್ತಿ-ಶ್ರದ್ಧೆಗಳಿಂದ ಆಚರಿಸಲಾಯಿತು. ಕೇತೋಹಳ್ಳಿ ಕಂಟ್ರಾಕ್ಟರ್ ಲಿಂಗದೇವರಪ್ಪ ಮತ್ತು ಸಹೋದರರ ಸೇವಾರ್ಥವಾಗಿ ನಿರ್ಮಿಸಿದ ಉದ್ದಾನೇಶ್ವರ ಗದ್ದುಗೆ ನೂತನ ಗೋಪುರವನ್ನು ಶ್ರೀ ಬಂಡೇಮಠಾಧ್ಯಕ್ಷ ಶ್ರೀ ಶ್ರೀ ಶಿವರುದ್ರಸ್ವಾಮಿಗಳು ಅನಾವರಣ ಮಾಡಿದರು. ಷಟ್‌ಸ್ಥಲ ಧ್ವಜಾರೋಹಣ ವನ್ನು ಹರವೆ ಮಠದ ಶ್ರೀ ಶ್ರೀ ಗಳು ನೆರವೇರಿಸಿದರು. ಉದ್ದಾನ ಶಿವಯೋಗಿಗಳ ಭಾವಚಿತ್ರವನ್ನು ವಿದ್ಯಾರ್ಥಿಗಳು ಮತ್ತು ಭಕ್ತರ ಸಮೂಹ ಮೆರವಣಿಗೆಯಲ್ಲಿ ಪೂರ್ಣ ಕುಂಭಗಳ ಮತ್ತು ಪಂಚಕಳಸಗಳೊಂದಿಗೆ ವೇದಿಕೆಗೆ ತರಲಾಯಿತು. ಬೆಂಗಳೂರು ಸರ್ಪಭೂಷಣ ಮಠದ ಶ್ರೀ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಸಮಾರಂಭ ಉದ್ಘಾಟಿಸಿ ಮಾತನಾಡಿ ಮರ್ತ್ಯಲೋಕದ ಮಾಲಿಕೆ ಉದ್ದಾನಶಿವಯೋಗಿಗಳು. ಭಕ್ತಿ-ವೈರಾಗ್ಯ ಸಂಪನ್ನರು. ಆಸೆ ತೊರೆದು ಮನೆಬಿಟ್ಟುಬಂದರು. ತ್ರಿಕರಣಪೂರ್ವಕವಾಗಿ ಗುರು ಅಟವೀಶಸ್ವಾಮಿಗಳ ಸೇವೆ ಮಾಡಿ ಅನುಗ್ರಹಕ್ಕೆ ಪಾತ್ರರಾದರು. ಸೇವೆಗೆ ಹಕ್ಕುದಾರ ರಾದರು. ಸಂಪತ್ತಿಗೆ ಹಕ್ಕುದಾರರಲ್ಲ. ಗುರುಕರುಣೆಯಿಂದ ಹಿಂದಿನದೆಲ್ಲಾ ಮುಂದು ವರಿಸಿಕೊಂಡು ಬರುತ್ತಾರೆ.

ಅವರು ಮಾಡಿದ ಅದ್ಭುತ ಕಾರ್ಯವೆಂದರೆ ಶ್ರೀ ಶ್ರೀ ಶಿವಕುಮಾರಸ್ವಾಮಿ ಗಳನ್ನು ಕೊಟ್ಟಿರುವುದು. ಇವರು ಈ ಭೂಮಿಯ ಅದ್ಭುತವೆಂದು ಬಣ್ಣಿಸಿದರು. ನೈತಿಕ ನೆಲಗಟ್ಟಮೇಲೆ ನಿಂತು ಸಾವಿರಪಟ್ಟು ಮಠ ಬೆಳೆಸಿದ್ದಾರೆ. 90 ರ ಅಂಚಿನಲ್ಲೂ ಸಮಾಜಕ್ಕೆ ಅಹರ್ನಿಸಿ ದುಡಿಯುತ್ತಿದ್ದಾರೆ. ಸಿದ್ಧಗಂಗಾ ಮಠವೆಂದರೆ ಅತ್ಯಾಶ್ಚರ್ಯ. ಭಯ-ಭಕ್ತಿ ಉಂಟಾಗುತ್ತದೆ. ಇಂಥ ಪೂಜ್ಯರನ್ನು ನೋಡಿ ಆದರ್ಶರಾಗಬೇಕು. ಅವರ ಸ್ಮರಣೆಯಿಂದ ನಾವು ಪವಿತ್ರರಾಗಬೇಕು ಎಂದು ನುಡಿದರು.

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರೊದ ಅಯ್ಯನಗೌಡರು ಉಪನ್ಯಾಸ ನೀಡಿದರು. ಮಠಗಳು ಸಂಸ್ಕೃತಿಯ ವಾಹಕಗಳು. ಇಲ್ಲಿ ಗುರುವಿನ ಪಾತ್ರ ದೊಡ್ಡದು. ಶಿವಪಥ ಅರಿವಡೆ-ಗುರುಪಥವೇ ಮೊದಲು. ಉತ್ತಮ ಸಚ್ಚಾರಿತ್ರ ನೀಡುವ ಸುಜ್ಞಾನ ಹರಡುವರು ಗುರುಗಳು. ಮಾನವ ವರ್ಗಕ್ಕೆ ಧರ್ಮ ಸಂಕೇತ ಗುರು, ನಾವೆಲ್ಲಾ ಒಂದೇ ಜಾತಿ, ಒಂದೇ ಧರ್ಮ, ಒಂದೇ ಕುಲ, ಸಮಾನರು ಎಂಬ ಭಾವನೆಯಿಂದ ಗುರುವಿರಬೇಕು. ಇಂಥ ಆದರ್ಶ ಗುಣಗಳನ್ನು ಹೊಂದಿದ್ದ ಉದ್ದಾನ ಶಿವಯೋಗಿಗಳು ಶ್ರೀ ಮಠದಲ್ಲಿ ಎಲ್ಲಾ ಕೋಮಿನ ವಿದ್ಯಾರ್ಥಿಗಳ ವಿದ್ಯಾ-ಭ್ಯಾಸಕ್ಕೆ ಅವಕಾಶ ಕಲ್ಪಿಸಿದರು. ಇಂಥ ಹಿನ್ನೆಲೆಯಿಂದ ಬೆಳೆದು ಬಂದ ಶ್ರಿ ಸಿದ್ಧಗಂಗಾ ಮಠ ಅಖಂಡ ಭಾರತದಲ್ಲಿ ಪ್ರಖ್ಯಾತಿಗಳಿಸಿದೆ ಎಂದರು.

ಬಂಡೇಮಠದ ಶ್ರೀ ಶ್ರೀ ಗಳು ಮಾತನಾಡಿ ಉದ್ದಾನಸ್ವಾಮಿಗಳ ಸೇವೆ ಮಾಡುವ ಭಾಗ್ಯ ನನಗೆ ದೊರೆತದ್ದು ಪುಣ್ಯಫಲ. ಅವರು ತ್ರಿಕಾಲ ಜ್ಞಾನಿಗಳು ಅಶರೀರವಾಗಿ ಮಾತನಾಡುತ್ತಿದ್ದರು. ಮಹಿಮಾತೀತರು, ಅವರ ಆಶೀರ್ವಾದಿಂದ ಜನತೆ ಉದ್ಧಾರವಾಗಿದೆ ಎಂದರು. ಹರವೆ ಮಠದ ಶ್ರೀ ಶ್ರೀ ಗಳು ಉದ್ದಾನಸ್ವಾಮಿಗಳು ಶ್ರೀ ಸಿದ್ಧಗಂಗಾ ಮಠವನ್ನು ಬೆಡಗಿನಕೈಲಾಸವನ್ನಾಗಿ ಮಾಡಿದ್ದಾರೆಂದು ಬಣ್ಣಿಸಿದರು.

ಸಮಾರಂಭದ ಸಾನಿಧ್ಯವಹಿಸಿದ್ದ **ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿ** ಗಳವರು ಆಶೀರ್ವಚನ ನೀಡಿ ವಿಜ್ಞಾನ-ತಾಂತ್ರಿಕ ಯುಗ ಪ್ರಾರಂಭವಾಗಿದೆ. ಎಲ್ಲವನ್ನು ಸಾಧಿಸಲು ಮಾನವ ಹೊರಟಿದ್ದಾನೆ. ಎಲ್ಲೆಲ್ಲೂ ಅತೃಪ್ತಿ, ಗೊಂದಲ, ಅಶಾಂತಿ. ಕೇವಲ ಭೌತಿಕ ಪ್ರಗತಿಯೇ ಜೀವನದ ಗುರಿಯಲ್ಲ. ಅದು ಪರಿಪೂರ್ಣವಾಗಬೇಕು. ತನ್ನನ್ನು ತಾನು ಅರಿಯಬೇಕು. ಆತ್ಮವಿಕಾಸ-ಆತ್ಮಜ್ಞಾನ ಬೇಕು. ನಮ್ಮ ಗುರುಗಳ ಸ್ಮರಣೋತ್ಸವ ಅವರ ಸಂದೇಶ ಅನುಸರಿಸಬೇಕು. ಅವರು ಶಾಲೆಗೆ ಹೋದವರಲ್ಲ. ಜೀವನ ವಿಧಾನವೇ ಅವರ ಪದವಿಯಾಗಿತ್ತು, ಬಡ ಕುಟುಂಬದಿಂದ ಬಂದವರು.

ಜನಾಂಗ ಉದ್ಧಾರಕ್ಕೆ ಶಿಕ್ಷಣವೇ ತಳಹದಿ ಎಂದು ತಿಳಿದಿದ್ದರು. ಶ್ರಮವಹಿಸಿ ಎಲ್ಲಾ ಕೆಲಸಗಳನ್ನೂ ಮಾಡಿದ್ದಾರೆ. 1928ರಲ್ಲಿ ನಾನು ಶ್ರೀ ಮಠಕ್ಕೆ ಬಂದೆ. 1931ರಲ್ಲಿ ನನಗೆ ಪಟ್ಟವಾಯಿತು. ಅವರ ಜೊತೆಯಲ್ಲಿ 10 ವರ್ಷ ಕಳೆದೆ. ಅವರು ಹೇಳುತ್ತಿದ್ದ ಮಾತು ನೆನಪಿಗೆ ಬರುತ್ತದೆ. ಕಾವಿ ಲಾಂಛನಧಾರಿಗಳು ಪಾವಿತ್ರ್ಯತೆ ಕಾಪಾಡಿಕೊಳ್ಳ ಬೇಕು. ಬ್ರಹ್ಮವಿದ್ಯೆ ಸಾಧನೆ ಕಷ್ಟ ಎಂದು ಹೇಳುತ್ತಿದ್ದರು. ಅವರ ನಡೆ ಇಟ್ಟರೆ ವರ ಕೊಟ್ಟರೆ ಶಾಪವಾಗಿತ್ತು. ಸ್ವಲ್ಪ ಓದಬೇಕು ಹೆಚ್ಚು ತಿಳಿಯಬೇಕೆಂದು ಹೇಳುತ್ತಿದ್ದರು. ಅವರ ಮಾರ್ಗದರ್ಶನ ಎಲ್ಲಾ ಕಾಲಕ್ಕೂ ಪ್ರಸ್ತುತ.

## ಗ್ರಾಮಾಂತರ ಬಸವ ಜಯಂತಿ ಸಮಾರೋಪ ಸಮಾರಂಭ–1994

ನಾಟಕ ಮಾಧ್ಯಮದಲ್ಲಿ ಬಸವಣ್ಣನವರ ಜೀವನದರ್ಶನವನ್ನು ಪೂಜ್ಯ ಶ್ರೀ ಶ್ರೀ ಗಳು 14 ವರ್ಷಗಳಿಂದ ನಾಡಿನಾದ್ಯಂತ ಪರಿಚಯಿಸುತ್ತಿದ್ದಾರೆ. ಈ ಸಮಾರೋಪ ಸಮಾರಂಭದಲ್ಲಿ ಶ್ರೀ ಬಸವರಾಜ ಮಲ್ಲಶೆಟ್ಟಿ ಉಪನ್ಯಾಸ ನೀಡಿದರು. ಪ್ರಪಂಚದ ಅದ್ಭುತ ಗಳಲ್ಲಿ ಬಸವಣ್ಣ ವಿಶೇಷ ಮಾನವ. ಅವರ ವಚನಗಳು ವ್ಯಕ್ತಿಯ ಸರ್ವಾಂಗೀಣ ಬೆಳವಣಿಗೆಗೆ ಕೊಡುಗೆಗಳಾಗಿವೆ. ಸರಳ ಬದುಕಿನಲ್ಲಿ ಆಧ್ಯಾತ್ಮಿಕತೆ ಇತ್ತು. ಪ್ರಜಾ ಪ್ರಭುತ್ವದ ಮಾದರಿಯನ್ನು ಅವರು ಸ್ಥಾಪಿಸಿದ ಅನುಭವ ಮಂಟಪದಲ್ಲಿ ಕಾಣಬ ಹುದು. ದೈವೀ ಪ್ರಜ್ಞೆ ಮಾನವತೆಕಡೆಗೆ ಯಾವಾಗಲೂ ಇರಬೇಕು. ಬಸವಣ್ಣನವರ ಸಮಾನತೆಯ ಎಲ್ಲಾ ಧೋರಣೆಗಳನ್ನು ಶ್ರೀ ಸಿದ್ಧಗಂಗಾ ಮಠದಲ್ಲಿ ಪೂಜ್ಯ ಶ್ರೀ ಶ್ರೀ ಗಳು ಅನುಷ್ಠಾನಕ್ಕೆ ತಂದಿದ್ದಾರೆ ಎಂದು ಶ್ಲಾಘಿಸಿದರು.

ಬೆಂಗಳೂರಿನ ಆ. ರಾ. ಮಿತ್ರ ಮಾತನಾಡಿ ರಾಜ್ಯದಲ್ಲಿ ಗ್ರಾಮಾಂತರ ಬಸವ ಜಯಂತಿ ಆರಂಭಿಸಿದ ಕೀರ್ತಿ ಶ್ರೀ ಸಿದ್ಧಗಂಗಾ ಮಠಕ್ಕೆ ಸಲ್ಲುತ್ತದೆ. ಇಂದು ಪಾಶ್ಚಾತ್ಯ ಸಂಸ್ಕೃತಿಗೆ ನಾವು ಮಾರು ಹೋಗಿದ್ದೇವೆ. ದಾಸರಾಗಿದ್ದೇವೆ. ಸ್ವಾರ್ಥ ದಿಂದ ಸಮಾಜ ಕಲುಷಿತವಾಗಿದೆ. ವಚನಗಳಲ್ಲಿ ಸಮಗ್ರ ಜೀವನ ದರ್ಶನವನ್ನು ಕಾಣಬಹುದು. ಮಕ್ಕಳಿಗೆ ವಚನಗಳನ್ನು ಕಂಠಪಾಠ ಮಾಡಿಸುವ ಪರಿಪಾಠ ಬೆಳೆಯ ಬೇಕೆಂದರು.

ಅಧ್ಯಕ್ಷತೆವಹಿಸಿ ಮಾತನಾಡಿದ ಸೂರ್ಯನಾಥ ಕಾಮತ್ ಬಸವಣ್ಣ ಸಮಾನ-ತೆಯ ಪ್ರತೀಕವಾಗಿದ್ದರು. ಆತ್ಮ-ಪರಮಾತ್ಮ, ಕಾಯಕ, ಸಮಾಜಸೇವೆ, ದೇವರ ಸೇವೆ, ಮೇಲು ಕೀಳು ಎಂಬ ಅಂಶಗಳಿಗೆ ಸಮಾನತೆ ಸ್ಪಂದಿಸಬೇಕು. ಜೀವನದಲ್ಲಿ ವ್ಯಕ್ತಿ ಸಾಧನೆ ಮಾಡಿ ಮೇಲೆ ಬರಬೇಕೆಂಬುದು ಬಸವಣ್ಣನವರ ತತ್ವವಾದ ಎಂದು ಹೇಳಿದರು.

## ಶ್ರೀ ಶ್ರೀ ಗಳವರ ಆಶೀರ್ವಚನ

ಜಗತ್ತಿನ ಎಲ್ಲಾ ಸಮಸ್ಯೆಗಳನ್ನು ಪರಿಹಾರ ಮಾಡುವ ಶಕ್ತಿ ಬಸವಣ್ಣನವರ ವಚನಗಳಲ್ಲಿವೆ. ವಿಜ್ಞಾನದ ಪ್ರಭಾವದಿಂದ ಮಾನವ ಸಂಕೋಚವಾಗಿದ್ದಾನೆ. ಸ್ವಾತಂತ್ರ್ಯದ ಅರ್ಥ ಭಿನ್ನವಾಗಿದೆ. ಧಾರ್ಮಿಕ, ಸಾಮಾಜಿಕ, ಅಸಮಾನತೆ, ಆರ್ಥಿಕ ಅಸಮಾನತೆಯಿಂದ ನೆಮ್ಮದಿ ಶಾಂತಿ ಇಲ್ಲವಾಗಿದೆ. ಇವುಗಳ ವಿರುದ್ಧ ಹೋರಾಟ ಮಾಡಿ ಧೈರ್ಯತುಂಬಿ ಮಾರ್ಗದರ್ಶನ ಮಾಡಿದ್ದಾರೆ. ಜನಕಲ್ಯಾಣಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡ ಬಸವಾದಿ ಶರಣರಿಗೆ ಕ್ರಿಯಾಶೀಲ ಜನಾಂಗ ನಿರ್ಮಾಣವೇ ಗುರಿಯಾಗಿತ್ತು. ಅವರನ್ನು ಅನುಸರಿಸುವುದೇ ನಾವಿಂದು ಮಾಡ ಬೇಕಾದ ಕೆಲಸ. ಸ್ತ್ರೀಯರ ಸಮಾನತೆ ಉದ್ಧಾರಕ್ಕಾಗಿ ವಿಶೇಷವಾಗಿ ಶ್ರಮಿಸಿದರು ಎಂದು ಕರೆ ನೀಡಿದರು. ಹೆಚ್. ವಿ. ವೀರಭದ್ರಯ್ಯನವರು ಈ ಸಮಾರಂಭಗಳ ಕಾರ್ಯಕ್ರಮವನ್ನು ನಿರೂಪಿಸಿದರು.

## 46 ನೇ ಗಣರಾಜ್ಯ ದಿನೋತ್ಸವ

ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಪೂಜ್ಯ ಶ್ರೀ ಶ್ರೀಗಳ ದಿವ್ಯ ಸಾನಿಧ್ಯದಲ್ಲಿ 26 ಜನವರಿ 1995 ಗುರುವಾರ 46 ನೇ ಗಣರಾಜ್ಯ ದಿನೋತ್ಸವ ಆಚರಿಸಲಾಯಿತು. ಅಧ್ಯಕ್ಷತೆಯನ್ನು ಕಿರಿಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ತುಮಕೂರು ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಾದ ಶ್ರೀ ಕೆ. ಜೋಸೆಫ್‌ರವರು ಧ್ವಜಾರೋಹಣಮಾಡಿ ವಿದ್ಯಾರ್ಥಿಗಳ ಪಥಸಂಚಲನೆಯಲ್ಲಿ ವಂದನೆ ಸ್ವೀಕರಿಸಿದರು. ಶ್ರೀ ಮಠದ ಆಡಳಿತಾ ಧಿಕಾರಿಗಳಾದ ಶ್ರೀ ಪುಟ್ಟಶಂಕರಯ್ಯನವರು ಮಾತನಾಡಿ ಭಾರತದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಆಚರಣೆಗೆ ಬಂದ ಐತಿಹಾಸಿಕ ದಿನದ ಸ್ಮರಣೆಗಾಗಿ ಇಂದು ರಾಷ್ಟ್ರೀಯ ಹಬ್ಬವನ್ನು ಆಚರಿಸುತ್ತಿದ್ದೇವೆ. ಮುಕ್ತವಾತಾವರಣದಲ್ಲಿ ಅನೇಕ ಚುನಾವಣೆಗಳು ನಡೆದು ಪ್ರಜಾಪ್ರಭುತ್ವ ಮೌಲ್ಯಗಳು ಜನಮನದಲ್ಲಿ ಬೇರೂರಿರುವುದು ಶ್ಲಾಘನೀಯ. ಆದಾಗ್ಯೂ ಅನೇಕ ರಾಷ್ಟ್ರೀಯ ಸಮಸ್ಯೆಗಳು ದೇಶವನ್ನು ಛಿದ್ರಗೊಳಿಸುತ್ತಿವೆ. ಇವುಗಳ ವಿರುದ್ಧ ಯುವಜನತೆ ಜಾಗೃತರಾಗಿ ಉಜ್ವಲ ರಾಷ್ಟ್ರ ಪ್ರೇಮಿಗಳಾಗಬೇಕೆಂದು ಹೇಳಿದರು.

ಕಿರಿಯ ಶ್ರೀ ಶ್ರೀ ಗಳು ಆಶೀರ್ವಚನ ನೀಡಿ ಒಂದು ರಾಷ್ಟ್ರದ ಪ್ರಗತಿ ಕೇವಲ ಭೌತಿಕ ಪ್ರಗತಿಯಿಂದ ಮಾತ್ರ ಅಳೆಯಬಾರದು. ರಾಷ್ಟ್ರದ ಏಕತೆ ಮತ್ತು ಸಮಗ್ರ-ತೆಯ ಆಧಾರದ ಮೇಲೆ ದೇಶ ಮುನ್ನಡೆ ಸಾಧಿಸುತ್ತದೆ. ಈ ದಿಶೆಯಲ್ಲಿ ಎಲ್ಲರೂ ಚಿಂತನೆ ಮಾಡಿ ಭಾರತದ ಸರ್ವಾಂಗೀಣ ಅಭಿವೃದ್ಧಿಗಾಗಿ ಕ್ರಿಯಾಶೀಲರಾಗಿ ಶ್ರಮಿಸ ಬೇಕೆಂದು ಕರೆ ನೀಡಿದರು.

ಎಲ್ಲಾ ಶಾಲಾ ವಿದ್ಯಾರ್ಥಿಗಳಿಂದ ವ್ಯಾಯಾಮ ಪ್ರದರ್ಶನ ಮತ್ತು ರಾಷ್ಟ್ರದ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು.

## 40 ನೇ ಹಳೆಯ ವಿದ್ಯಾರ್ಥಿ ಸಂಘದ ಮಹಾಧಿವೇಶನ

29 ನೇ ಜನವರಿ 1995 ಭಾನುವಾರ ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ 40 ನೇ ಸರ್ವಸದಸ್ಯರ ಸಭೆ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಶ್ರೀ ಶ್ರೀ ಗಳವರ ದಿವ್ಯ ನೇತೃತ್ವದಲ್ಲಿ ನಡೆಯಿತು. ರಾಜ್ಯದ ನಾನಾ ಜಿಲ್ಲೆಗಳಿಂದ ಸಹಸ್ರಾರು ಹಳೆಯ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಈ ಸಭೆಯಲ್ಲಿ ಶ್ರೀ ಶ್ರೀ ಗಳ ವಜ್ರ ಮಹೋತ್ಸವ ಸಮಿತಿ ಅಧ್ಯಕ್ಷರಾದ ಪದ್ಮಭೂಷಣ ಡಾ. ಎಂ. ಸಿ. ಮೋದಿ ಮತ್ತು ಕಾರ್ಯದರ್ಶಿಗಳಾದ ಶ್ರೀ ಎಸ್. ಎಸ್. ಹಸಬಿ ವಿಶೇಷ ಆಹ್ವಾನಿತರಾಗಿ ಸಭೆಗೆ ಆಗಮಿಸಿದ್ದರು.

ಸಂಘದ ಲೆಕ್ಕ ಪತ್ರಗಳನ್ನು ಕಾರ್ಯದರ್ಶಿಗಳಾದ ಕೆ. ಹೆಚ್. ಶಿವರುದ್ರಯ್ಯ, ವಸ್ತು ಪ್ರದರ್ಶನಕ್ಕೆ ಸಂಬಂಧಿಸಿದ ಲೆಕ್ಕಪತ್ರಗಳನ್ನು ಕಾರ್ಯದರ್ಶಿ ಬಿ. ಗಂಗಾಧರಯ್ಯ, ಸಿದ್ಧಗಂಗಾ ಮಾಸ ಪತ್ರಿಕೆ ವಾರ್ಷಿಕ ಲೆಕ್ಕ ಪತ್ರಗಳನ್ನು ಪ್ರಕಾಶಕರಾದ ಹೆಚ್. ಬಿ. ಗಂಗಾಧರಯ್ಯ, ಸಭೆಯ ಮುಂದೆ ಮಂಡಿಸಿದರು. ಇವುಗಳನ್ನು ಸಭೆ ಅನುಮೋದಿಸಿತು. ಆಡಳಿತಾಧಿಕಾರಿಗಳಾದ ಶ್ರೀ ಪಿ. ಎಸ್. ಪುಟ್ಟಶಂಕರಯ್ಯನವರು ನೌಕರರಿಂದ ವಜ್ರ ಮಹೋತ್ಸವ ನಿಧಿಗೆ ಅರ್ಪಿಸಿದ ಕೊಡುಗೆಯ ಲೆಕ್ಕ ಪತ್ರವನ್ನು ಸಭೆಗೆ ತಿಳಿಸಿದರು.

ವಜ್ರ ಮಹೋತ್ಸವ ಪ್ರತಿಷ್ಠಾನ ಪ್ರಗತಿ ಬಗ್ಗೆ ಎಸ್. ಎಸ್. ಹಸಬಿಯವರು ಮಾತನಾಡಿ ನಿರ್ಮಿಸುತ್ತಿರುವ ಸುಸಜ್ಜಿತ ವಿದ್ಯಾರ್ಥಿನಿಲಯ 198 ಕೊಠಡಿಗಳನ್ನು ಹೊಂದಿದೆ. ಈಗಿನ ಬೆಲೆ ಪ್ರತಿ ಕೊಠಡಿಗೆ 50,000 ರೂಗಳನ್ನು ಮೀರುತ್ತದೆ. ಆದರೆ $2\frac{1}{2}$ ವರ್ಷಗಳ ಹಿಂದೆ ಸಂಗ್ರಹಿಸಿದ ಮೊತ್ತ ಪ್ರತಿ ಕೊಠಡಿಗೆ 35,000ರೂ ಇದರ ಪರಿಣಾಮವಾಗಿ ಹಣದ ಮುಗ್ಗಟ್ಟು ಉಂಟಾಗಿದೆ.

**ಪ್ರಸಾದ ನಿಲಯ :-** ಏಕಕಾಲದಲ್ಲಿ 3,500 ಮಂದಿ ಕುಳಿತು ಊಟ ಮಾಡುವಷ್ಟು ವಿಶಾಲವಾಗಿದೆ. ಇದಕ್ಕಾಗಿ ಬೆಂಗಳೂರಿನ ಕೈಗಾರಿಕೋದ್ಯಮಿ ಶ್ರೀ ಜಿಂದಾಲ್ 11 ಲಕ್ಷ ರೂ, ಶ್ರೀ ದಾಸಪ್ಪ 3 ಲಕ್ಷ ರೂ, ತುಮಕೂರು ಗ್ರೈನ್ ಮರ್ಚೆಂಟ್ ಬ್ಯಾಂಕ್ 9 ಲಕ್ಷ ರೂ, ಮತ್ತು ಡಾ. ಸುಶೀಲಮ್ಮ 10 ಲಕ್ಷ ರೂಗಳನ್ನು ಉದಾರವಾಗಿ ನೀಡಿದ್ದಾರೆ. ವಿದೇಶದಿಂದ ಜಿ. ಪರಮೇಶ್ವರಪ್ಪನವರು 21,18,300 ರೂ ಸಂಗ್ರಹಿಸಿ ನೀಡಿದ್ದಾರೆ.

ಈ ವರೆಗೆ ಈ ಪ್ರತಿಷ್ಠಾನ ಯೋಜನೆಗೆ ಸಂಗ್ರಹವಾಗಿರುವ ಒಟ್ಟು ಮೊತ್ತ 2,21,36,456 ರೂಗಳು. ಪ್ರಸ್ತುತ ಖರ್ಚಾಗಿರುವ ಹಣ 2 ಕೋಟಿ, 8 ಲಕ್ಷ ರೂ

ಕಟ್ಟಡಗಳು ಪೂರ್ಣವಾಗಲು ಇನ್ನೂ $1\frac{1}{2}$ ಕೋಟಿ ರೂ.ಗಳು ಬೇಕಾಗಿದೆ. ಮಹಾಸಾಧನೆ ಮಾಡಿರುವ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ಸ್ಮರಣೆ ಸಹಸ್ರ ಸಹಸ್ರ ವರ್ಷಗಳ ಕಾಲ ಜನಮನದಲ್ಲಿ ಉಳಿಯುವ ಭವ್ಯ ಸ್ಮಾರಕಗಳಾಗಿವೆ.

ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಮತ್ತು ನಾಡಿದ ಜನತೆ ಶ್ರದ್ಧಾ-ಭಕ್ತಿಯಿಂದ ಈ ಪುಣ್ಯಕಾರ್ಯಕ್ಕೆ ನೆರವಾಗಬೇಕೆಂದು ಮನವಿ ಮಾಡಿದರು.

ಯೋಜನೆಯ ಅಧ್ಯಕ್ಷರಾದ ಡಾ. ಮೋದಿ ಮಾತನಾಡಿ ಹೆಚ್ಚು ಮಾತನಾಡುವ ಪ್ರವೃತ್ತಿ ದೊಡ್ಡರೋಗ. ಈ ಪವಿತ್ರ ಪ್ರತಿಷ್ಠಾನಕ್ಕೆ ವಾಗ್ದಾನ ಮಾಡದೆ ಒಂದೇ ಬಾರಿಗೆ ನೀಡಬೇಕು. ಶ್ರೀ ಶ್ರೀಗಳ ನಿಜವಾದ ದಾಸೋಹ ಸಿದ್ಧಗಂಗೆಯಲ್ಲಿದೆ. ಪ್ರತಿಷ್ಠಾನ ಯೋಜನೆ ಅವರಿಗೆ ಇಷ್ಟವಿರಲಿಲ್ಲ. ಆದರೂ ಒತ್ತಾಯ ಮಾಡಿ ಒಪ್ಪಿಸಿದೆವು. ಇಂಥ ಡೈನಿಂಗ್‌ಹಾಲ್ ಮತ್ತು ಹಾಸ್ಟೆಲ್ ಎಲ್ಲಿಯೂ ಕಾಣಲು ಸಾಧ್ಯವಿಲ್ಲ. ನಾನು ವಿದ್ಯಾರ್ಥಿಯಾಗಿ ಇಲ್ಲಿಯೇ ಉಳಿಯಬೇಕೆಂಬ ಹಂಬಲವಾಗುತ್ತಿದೆ. ಶ್ರೀ ಶ್ರೀಗಳು ಮಹಾಕಾರ್ಯಗಳನ್ನು ಮಾಡಿ ವಿಖ್ಯಾತರಾಗಿದ್ದಾರೆ. ಈ ಬೃಹತ್ ಕಟ್ಟಡಗಳ ವಿನ್ಯಾಸ ಮತ್ತು ಸುಂದರತೆಯನ್ನು ಜನತೆಗೆ ಪರಿಚಯಿಸಿ ತೋರಿಸಿ. ಅತ್ಯುತ್ತಮ ಕಾರ್ಯ ನಡೆಯುತ್ತಿದೆ. ಇದಕ್ಕೆ ಹಣವನ್ನು ಉದಾರವಾಗಿ ಎಲ್ಲರೂ ನೀಡಿ ಕೃತಾರ್ಥರಾಗಬೇಕೆಂದು ಕರೆಕೊಟ್ಟರು.

ಸಂಘ ಮತ್ತು ಪ್ರತಿಷ್ಠಾನ ಯೋಜನೆಯನ್ನು ಕುರಿತು ಹಳೆಯ ವಿದ್ಯಾರ್ಥಿಗಳಾದ ಚನ್ನಪ್ಪ ಎರೆಸೀಮೆ ಹೆಚ್.ವಿ. ವೀರಭದ್ರಯ್ಯ, ಸಾಸಲು ನಂಜುಂಡಪ್ಪ, ಎಸ್. ಚನ್ನಬಸವಯ್ಯ, ಮುದ್ದರಂಗಯ್ಯ ಮತ್ತು ಕಂಬೇಗೌಡ ಮಾತನಾಡಿದರು. ಆದಿನದ ಅದೃಷ್ಟವಂತನಾಗಿ ಆಯ್ಕೆಯಾದ ಪಿ.ಆರ್. ಸೋಮಶೇಖರಯ್ಯನವರಿಗೆ ಪೂಜ್ಯ ಶ್ರೀ ಶ್ರೀಗಳವರ ಭಾವ ಚಿತ್ರ ನೀಡಲಾಯಿತು.

### ಶ್ರೀ ಶ್ರೀಗಳವರ ಆಶೀರ್ವಚನ :-

ಶ್ರೀ ಮಠಕ್ಕೆ ಸಚ್ಚಾರಿತ್ರ್ಯ ಪರಂಪರೆ ಹಿನ್ನೆಲೆ ಇದೆ. 1941 ರಲ್ಲಿ ಸಂಸ್ಥೆ ಜವಾಬ್ದಾರಿ ಬಂತು. 120 ಮಂದಿ ವಿದ್ಯಾರ್ಥಿಗಳು ಇದ್ದರು. ನಿರ್ವಹಣೆ ತೀರಾ ಕಷ್ಟವಾಗಿತ್ತು. ವಿದ್ಯಾರ್ಥಿಗಳಿಂದ ಹಣಪಡೆದು ಪ್ರಯಾಣ ಮಾಡಬೇಕಾಗಿತ್ತು. ಚೇಳೂರಿನ ಚಿಕ್ಕಣ್ಣ ಮತ್ತು ದೇವನಹಳ್ಳಿ ಶಿವಮ್ಮ ನೀಡಿದ ಹಣ ಶ್ರೀ ಮಠಕ್ಕೆ ಬುನಾದಿಯಾಗಿ ದೊಡ್ಡ ನಿಧಿಯಾಯಿತು ಎಂದು ಸ್ಮರಿಸಿದರು.

ಪ್ರಸ್ತುತ ಇರುವ ಕೊರತೆಗಳ ನಿವಾರಣೆಗಾಗಿ ವಜ್ರ ಮಹೋತ್ಸಕ್ಕೆ ಒಪ್ಪಬೇಕಾಯಿತು. ಕಟ್ಟಡಗಳ ಸ್ಮಾರಕವಾದ್ದರಿಂದ ಆಕರ್ಷಕವಾಗಿ, ಭವ್ಯವಾಗಿ ಇರ

ಕೆಂದು ಪ್ರತಿಷ್ಠಾನ ಯೋಜನೆಯ ಪದಾಧಿಕಾರಿಗಳು ಪ್ರಾಮಾಣಿಕವಾಗಿ ಕೆಲಸ ಮಾಡುತ್ತಿದ್ದಾರೆ. ಹಳೆಯ ವಿದ್ಯಾರ್ಥಿಗಳು ನಾಡಿನ ಜನತೆ ಉದಾರವಾಗಿ ಈ ಕಾರ್ಯಕ್ಕೆ ನೆರವಾಗುತ್ತಿದ್ದಾರೆ ಎಂದು ಹೇಳಿದರು.

ಶ್ರೀ ಮಠದ ಹಳೆಯ ವಿದ್ಯಾರ್ಥಿಸಂಘ ದೊಡ್ಡ ಆಸ್ತಿ. ದೊರೆಯುವ ಸಾಮಾನ್ಯ ಸೌಕರ್ಯ ಪಡೆದು ಉಪಕಾರ ಸ್ಮರಿಸುತ್ತಿರುವುದು ಸಂತೋಷ ಸಂಗತಿ. ಪೂಜ್ಯತೆ ಗೌರವ ಭಾವನೆ ಉಳ್ಳವರಾಗಿದ್ದೀರಿ. ಎಲ್ಲಾ ಕಾರ್ಯ ಚಟುವಟಿಕೆಗಳಲ್ಲಿ ತುಂಬು ಸಹಕಾರ ನೀಡುತ್ತಿರುವುದು ಹರ್ಷವನ್ನುಂಟು ಮಾಡಿದೆ. ಇದುವರೆಗೆ ಮಾಡಿದ ಸೇವೆಗಿಂತ ವಿಶಿಷ್ಟವಾದ ಆಧ್ಯಾತ್ಮಿಕ ಸೇವೆಯನ್ನು ವಜ್ರಮಹೋತ್ಸವದ ನಂತರ ಸಮಾಜಕ್ಕೆ ನೀಡಲು ಸಂಕಲ್ಪಿಸಿರುವುದಾಗಿ ಹೇಳಿದರು. ಮಠಾಧಿಪತಿಗಳು ಸತ್ ಚಾರಿತ್ರ್ಯ ಉಳ್ಳವರಾಗಿರುವಂತೆ ನೋಡಿಕೊಳ್ಳುವುದು ಸಮಾಜದ ಕರ್ತವ್ಯ. ಕಾವಿಧಾರಿಗಳು ನೈತಿಕ ಸಂಪನ್ನರಾಗಿರಬೇಕು. ಸಮಾಜ ಅವರನ್ನು ಭಕ್ತಿ ಗೌರವಗಳಿಂದ ಕಾಣುವುದರ ರಹಸ್ಯ ಇದೇ ಆಗಿದೆ. ಸಿದ್ಧಗಂಗಾ ಮಠ ತನ್ನ ಅಸ್ತಿತ್ವವನ್ನು ನೈತಿಕ ಚಾರಿತ್ರ್ಯದ ಮೇಲೆಯೇ ಸಂರಕ್ಷಿಸಿಕೊಂಡು ಬಂದಿದೆ. ಅದರ ಜವಾಬ್ದಾರಿ ತಮ್ಮ ಮೇಲಿದೆ ಎಂದುಹಳೆಯ ವಿದ್ಯಾರ್ಥಿಗಳಿಗೆ ಕರೆ ಇತ್ತರು. ಪ್ರಾರಂಭಕ್ಕೆ ಸಂಘದ ಪ್ರಧಾನ ಕಾಯಾದರ್ಶಿ ಎಂ.ಎನ್. ಚನ್ನಬಸಪ್ಪ ಸ್ವಾಗತ ಕೋರಿದರು. ಹೆಚ್. ಬಿ. ಗಂಗಾಧರಯ್ಯ ವಂದನೆ ಸಲ್ಲಿಸಿದರು.

"SIDDAGANGA" MONTHLY Reg. No. KRNQ - 9



ನಿರ್ಮಾಣದ ಹಂತದಲ್ಲಿರುವ ಏಕಕಾಲದಲ್ಲಿ 3500 ಮಂದಿ
ಕುಳಿತು ಊಟಮಾಡುವ ಸುಸಜ್ಜಿತ ಪ್ರಸಾದನಿಲಯ



ನಿರ್ಮಾಣದ ಹಂತದಲ್ಲಿರುವ ಪೂಜ್ಯ ಶ್ರೀ ಶ್ರೀಗಳವರ
ವಜ್ರ ಮಹೋತ್ಸವ ಸ್ಮಾರಕ ಬೃಹತ್ ವಿದ್ಯಾರ್ಥಿನಿಲಯ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ – 572104.